# ಮಾನಸಿ

ತಿಂಗಳ ಪತ್ರಿಕೆ

ಅಕ್ಟೋಬರ್ : 1999

- ನಾವು ಎಸ್.ಸಿ. ಆಗಿ ಹುಟ್ಟೇಕಾಗಿತ್ತು!
- ಚಿಕ್ಕವಯಸ್ಸಿನಲ್ಲಿ ಬಲಾತ್ಕಾರ
- 'ಶರದೋತ್ಸವ'
- ಪಂಚಾಯ್ತಿ ಉಪಾಧ್ಯಕ್ಷನಿಂದ ಲೈಂಗಿಕ ದೌರ್ಜನ್ಯ
- ಶೋಷಣೆಯ ಸಿಕ್ಕಿನಲ್ಲಿ ಕಮಲಾ
- 'ಸತಿ ಸಹಗಮನ ಗೌರವದ ಸಂಕೇತ'!

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 14    ಸಂಚಿಕೆ : 9

ಅಕ್ಟೋಬರ್ : 1999





ವಿಳಾಸ

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


## ಈ ಸಂಚಿಕೆಯಲ್ಲಿ......






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ಎಲ್ಲೆಲ್ಲೂ ಅಂಧಕಾರ, ಆಕ್ರಂದನ, ಹಾಹಾಕಾರ, ಕಣ್ಣೀರ ಕೋಡಿ, ಹೇಳಲಾಗದ ಸಹಿಸಲಾಗದ ಸಂಕಟ, ಇಡೀ ಜೀವ ಸಂಕುಲವೇ ಹೆಣದ ರಾಶಿ ರಾಶಿಗಳಾಗಿ ಬಿದ್ದದ್ದು, ಗಿಡ ಮರ, ಮನೆ ಮಠ ಬುಡ ಸಮೇತ ಉರುಳಿದ್ದು, ಎಲ್ಲವೂ ಜಲಾವೃತವಾಗಿ ಶೂನ್ಯ ಶೂನ್ಯವಾಗಿದ್ದು ಈ ಶತಮಾನದ ಅತೀ ಘೋರ ಚಂಡಮಾರುತದ ಪ್ರಭಾವ.

ರಾಜ್ಯದಲ್ಲಿ ತನ್ನದಲ್ಲದ ಸರ್ಕಾರವಿರುವುದರಿಂದ ಕೇಂದ್ರದ ಕಮಿಟಿ ಇದನ್ನು "ರಾಷ್ಟ್ರೀಯ ವಿಪತ್ತು" ಎಂದು ಘೋಷಿಸಲು ಆಮೆ ನಡಿಗೆಯಿಡುತ್ತಿದೆ, ಕಾಳಸಂತೆಕೋರ ವ್ಯಾಪಾರಿ ಜನ ಈ ತಬ್ಬಲಿಗಳನ್ನು ಲೂಟಿ ಹೊಡೆದಿದ್ದಾರೆ. ಬದುಕಿ ಯಾಕೆ ಉಳಿದೆವಪ್ಪ ಎಂಬ ಜನರ ಆರ್ತನಾದ ಮನುಕುಲವನ್ನೇ ಅಣಕಿಸುವಂತಿದೆ.

ಆಧುನಿಕ ತಂತ್ರಜ್ಞಾನ, ಉಪಗ್ರಹದ ಮೂಲಕದ ಮಾಹಿತಿ ಸಂಗ್ರಹಣೆ ಅಣುಬಾಂಬ್ ತಯಾರಿಸಬಲ್ಲೆವೆಂಬ ಅಹಂಕಾರ ಎಲ್ಲವೂ ಇದ್ದು ಏನು ಮಾಡಲಾಗದೆ ಕೂರಿಸಿದೆ. ಪ್ರಳಯಾಂತಕ ಶಕ್ತಿಯ ಮುನ್ಸೂಚನೆ ಪಡೆಯಬಹುದಾದರೂ ಅದನ್ನು ತಡೆಯಲಾಗದ ವೈಜ್ಞಾನಿಕ ಮುಂದುವರಿಕೆ ಒಪ್ಪಿಕೊಳ್ಳಲಾಗದ, ತಪ್ಪಿಸಿಕೊಳ್ಳಲಾಗದ ಅಪ್ರಿಯ ಸತ್ಯ.

ಚಂಡಮಾರುತದ ಪ್ರಕೋಪವೊಂದು ಕಡೆಯಾದರೆ ಅದರ ಪ್ರತಿಕೂಲ ಪರಿಸ್ಥಿತಿಯಿಂದ ಅನ್ನ, ನೀರು ಮುಂತಾದ ಮೂಲಭೂತ ಸೌಲಭ್ಯದಿಂದ ವಂಚಿತರಾಗಿರುವವರೆಗೆ ತಕ್ಷಣ ಇದರ ವ್ಯವಸ್ಥೆ ಎಡೆಬಿಡದೆ ನಡೆಯಬೇಕಾಗಿದೆ. ಬದುಕುಳಿದವರಲ್ಲಿ ಆಶಾಭಾವನೆ ತುಂಬಬೇಕಾಗಿದೆ. ಸಾಂಕ್ರಾಮಿಕ ರೋಗ ಎಲ್ಲೆಡೆ ವ್ಯಾಪಿಸುತ್ತಿರುವ ವರದಿಯಾಗುತ್ತಿದೆ. ಕೊಳೆತ ಹೆಣಗಳಿರುವ ನೀರನ್ನೇ ಕುಡಿಯಬೇಕಾದ ಪರಿಸ್ಥಿತಿಯಿದೆ. ಔಷಧಿಗಳಿಲ್ಲದೆ ಆರೋಗ್ಯ ಕಾಪಾಡಲು ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಬೇಕಾದ ಅನಿವಾರ್ಯ ಒದಗಿದೆ. ಈ ನೈಸರ್ಗಿಕ ವಿಕೋಪ ಹಳ್ಳಿಗಾಡಿನ ಸ್ಥಿತಿ ಸರಿಪಡಿಸಲು ದೀರ್ಘಕಾಲ ಹಿಡಿಯುತ್ತದೆ. ಇದು ಕೇವಲ ಒರಿಸ್ಸಾ ಸರ್ಕಾರದ ಸಮಸ್ಯೆಯೆಂದು ತಿಳಿಯದೆ ಪ್ರಕೃತಿ ಮುಂದೆ ಅಸಹಾಯಕರಾದ ಮಾನವರಿಗೆ ಎಲ್ಲ ಬಗೆಯ ಸ್ಪಂದನದ, ಒಳಗೊಳ್ಳುವಿಕೆಯ ಜರೂರ್ ಇದೆ. ಪ್ರಚಾರಕ್ಕೆ, ಭ್ರಷ್ಟಾಚಾರಕ್ಕೆ, ಸ್ವಾರ್ಥಕ್ಕೆ, ರಾಜಕೀಯಕ್ಕೆ ಲೂಟಿಗೆ ಎಲ್ಲಕ್ಕೂ ಪೂರ್ಣವಿರಾಮ ಹಾಕಿ ಮನುಷ್ಯರಿಗೆ ಮಾನವರಾಗಿ ಸ್ಪಂದಿಸೋಣ.

# ನಾವು ಎಸ್.ಸಿ. ಆಗಿ ಹುಟ್ಬೇಕಾಗಿತ್ತು!

• ಎಚ್. ಎಸ್. ರಾಜೇಶ್ವರಿ

ಅದೊಂದು ಬೆಂಗಳೂರು ಜಿಲ್ಲೆಯ ಗ್ರಾಮ. ಆ ಗ್ರಾಮದಲ್ಲೊಂದು ಸರ್ಕಾರಿ ಕಾರ್ಯಕ್ರಮವನ್ನು ನಡೆಸಬೇಕಾದ ಸಂದರ್ಭ ಬಂದಾಗ, ಅಧಿಕಾರಿಗಳು ಆ ಗ್ರಾಮದ ಮುಖ್ಯಸ್ಥನನ್ನು ಹಾಗೂ ಆತನ ಹೆಂಡತಿಯನ್ನು ಸಂಪರ್ಕಿಸಿ, ಅವರ ಗ್ರಾಮದಲ್ಲಿ ಈ ಕಾರ್ಯಕ್ರಮವನ್ನು ನಡೆಸಿಕೊಡುವಂತೆ ಹಾಗೂ ಕಾರ್ಯಕ್ರಮಕ್ಕೆ ಬೇಕಾದ ವ್ಯವಸ್ಥೆಯನ್ನು ಮಾಡಿಕೊಡುವಂತೆ ಕೋರಿದ್ದರು.

ಕೇಂದ್ರ ಸರ್ಕಾರ ಗ್ರಾಮೀಣ ಮಹಿಳೆಯರಿಗೆ ಹಮ್ಮಿಕೊಂಡ ಯೋಜನೆಗಳನ್ನು ಕುರಿತು ಸಮಗ್ರ ಮಾಹಿತಿಯನ್ನು ನೀಡುವುದು ಈ ಕಾರ್ಯಕ್ರಮದ ಉದ್ದೇಶವಾಗಿತ್ತು. ಗ್ರಾಮದ ಮುಖ್ಯಸ್ಥನ ಹೆಂಡತಿ ಚಂದ್ರಮ್ಮ, ಪಂಚಾಯ್ತಿ ಸದಸ್ಯೆ.

ಸುಮಾರು 34-35 ವರ್ಷದ ಚಂದ್ರಮ್ಮ S.S.L.C. ಓದಿದವಳು. ಹಸುಗಳ ವ್ಯಾಪಾರ ಮಾಡುವುದು ಹಾಗೂ ಊರಿನ ಜನರಿಗೆ ಹೆಚ್ಚಿನ ಬಡ್ಡಿಗೆ ಸಾಲ ನೀಡುವುದು, ವ್ಯವಸಾಯ ಇವೆಲ್ಲಾ ಅವರ ವೃತ್ತಿಗಳು. ಸಾಲ ಕೊಡುವಾಗಲೂ ಒಡವೆ ಅಥವಾ ಜಮೀನು ಪತ್ರಗಳನ್ನು ಇಟ್ಟುಕೊಂಡು ಅಥವಾ ತಮ್ಮ ಹೆಸರಿಗೆ ಬರೆಸಿಕೊಂಡು ಸಾಲ ನೀಡುವರು. ಚಂದ್ರಮ್ಮ ಗಂಡನಿಗೆ ತಕ್ಕ ಜೋಡಿ. ಮಾತುಗಾರಿಕೆಯನ್ನು ಚೆನ್ನಾಗಿ ಬಲ್ಲವಳು. ಅಧಿಕಾರಿಗಳು ಮನೆ ಬಾಗಿಲಿಗೆ ಬಂದು ಕಾರ್ಯಕ್ರಮ ಮಾಡುವ ಉದ್ದೇಶ, ಮಾಡಬೇಕಾದ ವ್ಯವಸ್ಥೆ, ಅದರ ಖರ್ಚು ವೆಚ್ಚವನ್ನು ಸರ್ಕಾರವೇ ನೀಡುವುದು, ಕಾರ್ಯಕ್ರಮಕ್ಕೆ ಮಹಿಳೆಯರನ್ನು ಸೇರಿಸುವುದು ಮುಂತಾದವನ್ನು ವಿವರಿಸಿ ಮುಗಿಸುವ ಮೊದಲೇ, "ನೀವೇನು ಯೋಚನೆ ಮಾಡ್ಬೇಡಿ, ನಮ್ಮ ಗ್ರಾಮ ಅಂದ ಮೇಲೆ ಈ ಕೆಲಸಗಳನ್ನೆಲ್ಲಾ ಮಾಡಲೇಬೇಕಾಗುತ್ತೆ, ನೀವು ಆ ದಿನ ಬಂದು ನೋಡಿ, ನಮ್ಮ ಹಳ್ಳಿ ಹೆಂಗಸರಿಗೆ ಇವೆಲ್ಲಾ ಏನೂ ಗೊತ್ತಿಲ್ಲ. ನೀವಾಗೆ ಮನೆ ಬಾಗಿಲಿಗೆ ಬಂದು ಇಂತಹ ಕಾರ್ಯಕ್ರಮ ಮಾಡ್ತೀವಿ ಅಂದಾಗ, ನಾವು ಅಷ್ಟು ಸಾಕಾರ ನೀಡ್ದಿಲ್ಲ ಅಂದ್ರೆ ಹೇಗೆ? ನಮ್ಮ ಗ್ರಾಮದ ಕೆಲ್ಸ ಇದು. ನಾವೇ ಕೈಯಿಂದ ಹಾಕಿಕೊಂಡು ಬೇಕಾದ್ರೆ ಮಾಡ್ತೀವಿ". ಚಂದ್ರಮ್ಮ ಅವರಿಗೆ ಮಾತನಾಡಲು ಅವಕಾಶ ನೀಡದೆ, ಒಂದೇ ಉಸುರಿಗೆ ಆಡಿ ಮುಗಿಸಿದಳು. ಆಕೆಯ ಗಂಡನು ಆಶ್ವಾಸನೆಯಿತ್ತು ಕಳಿಸಿದ.

ಅಧಿಕಾರಿಗಳು ಆಕಡೆ ಹೋಗುತ್ತಿದ್ದ ಹಾಗೆ ಆಕೆಯ ವಾರಗಿತ್ತಿ ನಾಗರತ್ನ, "ನೀನು ಎಲ್ಲಾ ಮಾಡ್ತೀನಿ, ಮಾಡ್ತೀನಿ ಅಂತ ಒಂದೇ ಉಸಿನಾಗೆ ಒಪ್ಪಿಕೊಂಡುಬಿಟ್ಟೆ. ಜನ ಸೇರುವುದು ಅಷ್ಟು ಸುಲಭವೆ? ಈ ಹಳ್ಳಿ ಜನಕ್ಕೆ ಎಷ್ಟು ಮಾಡಿದರೂ ಅಷ್ಟೆ, ನೀನು ಯಾಕೆ ಒಪ್ಪಿಕೊಳ್ಳಲು ಹೋದೆ" ಎಂದು ರಾಗ ಎಳದ್ಲು!!

"ನಿನಗೆ ಗೊತ್ತಾಗಲ್ಲ ಸುಮ್ನಿರು. ಅವರು ಸರ್ಕಾರದ ಅಧಿಕಾರಿಗಳು. ಅವರೆದುರಿಗೆ ಇದೆಲ್ಲಾ ಆಗಲ್ಲ ಎಂದು ಹೇಳಬಾರ್ದು. ಮನೆಮನೆ ತಿರುಗಿ ಜನ ಸೇರ್ಸಾಕೆ ನಾನು ತೋಟಿನಾ? ಆ ತೋಟಿಗೆ ನಾಲ್ಕು ಕಾಸು ಕೊಟ್ರೆ ಊರೆಲ್ಲಾ ಸಾರಿಕೊಂಡು ಬರ್ತಾನೆ. ಆ ಹೊಲೇರ ಹಟ್ಟಿ ಜಯಮ್ಮನ ಪಂಚಾಯ್ತಿ ಮೆಂಬರ್ ಮಾಡಿದ್ಯಾಕೆ? ಅವರ ಹಟ್ಟಿ ಹೆಂಗಸರನ್ನೆಲ್ಲಾ ಕರೆದುಕೊಂಡು ಬಾ ಅಂದ್ರೆ, ಅವು ಏನಾರ ಕೊಡ್ತಾರೆ ಅಂತ ಬಾಯಿ ಬಿಟ್ಕೊಂಡು ಬರ್ತಾವೆ. ಇನ್ನು ತಿಂಡಿಗೆ ನಮ್ಮ ಪಕ್ಕದೂರಿನ ಪುಟ್ಟಣ್ಣಂಗೆ ಸಾಮಾನು ತರಿಸಿಕೊಟ್ರೆ ಮಾಡ್ತಾನೆ. ಅದೇನು ದೊಡ್ಡ ಕೆಲ್ಸ" ಎಂದು ಬರ್ರನೆ ಕೈಬೀಸಿ ಒಳನಡೆದಳು.

ಆ ಗ್ರಾಮದ ಹೊಲೇರ ಹಟ್ಟಿ ಹೆಂಗಸರೆಲ್ಲಾ ಒಂದು ಶಿಸ್ತು ರೂಢಿಸಿಕೊಂಡಿದ್ದಾರೆ. ಎಲ್ಲಿ ಕರೆದರು ತಲೆಗಿಷ್ಟು ಎಣ್ಣೆ ಇಟ್ಟು, ಕಾಸಿನಗಲ ಕುಂಕುಮ ಇಟ್ಟು ಜಯಮ್ಮನ ಮಾತಿಗೆ ಎರಡು ಹೇಳದೆ ಅವಳ ಜೊತೆಗೆ ಹೋಗುತ್ತಾರೆ. ಈ ಹೆಂಗಸರೆಲ್ಲಾ ಆ ಗ್ರಾಮದ ಮೇಲು ಜಾತಿಯ ಮಹಿಳೆಯರಿಗಿಂತ ಹೆಚ್ಚು ಅಕ್ಷರಸ್ಥರು.

ಚಂದ್ರಮ್ಮ ಮೊದಲೇ ಜಯಮ್ಮನಿಗೆ ಕಟ್ಟುನಿಟ್ಟಾಗಿ ಹೇಳಿದ್ಲು. "ಆ ದಿನ ನೀನು ನಿಮ್ಮ ಹಟ್ಟಿಯ ಎಲ್ಲಾ ಹೆಂಗಸರನ್ನು ಕರೆದುಕೊಂಡು ಬರ್ಲೇಬೇಕು. ಒಂದು ದಿನದ ಕೂಲಿ ಹೋದ್ರೆ ಹೋಯ್ತು. ನಾಳೆ ಸರ್ಕಾರದಿಂದ ಸಿಗೋ ಅನುಕೂಲ ಎಲ್ಲಾ ಹೊಂಟುಹೋಯ್ತು, 'ಎಲ್ಲಾ ಚಂದ್ರಮ್ಮ ವಾಪಸ್ಸು ಕಳಿಸಿದ್ಲು' ಅಂತ ನನ್ನನ್ನು ಬೈಕೊಳ್ಳಬಾರದು. ನಿಮ್ಮ ಹೆಂಗಸರನ್ನೆಲ್ಲಾ ಟೈಂಗೆ ಸರಿಯಾಗಿ ಕರೆದುಕೊಂಡು ಬಂದ್ಬಿಡು" ಎಂದು ತಾಕೀತು ಮಾಡಿದಳು.

ಊರಿನಲ್ಲಿ ಏನಾದ್ರೂ ಸಾರ್ವಜನಿಕ ಕಾರ್ಯಕ್ರಮ ಮಾಡಬೇಕು ಅಂದ್ರೆ ಜಾಗವಿಲ್ಲ. ಊರಿನವರೆಲ್ಲಾ ದುಡ್ಡು ಹಾಕಿ ಕಟ್ಟಿಸಿದ ವೆಂಕಟರಮಣಸ್ವಾಮಿ ದೇವಸ್ಥಾನದ ವರಾಂಡದಲ್ಲಿ ಕಾರ್ಯಕ್ರಮ ಮಾಡುವುದೆಂದು ತೀರ್ಮಾನಿಸಿದರು. ವೆಂಕಟರಮಣಸ್ವಾಮಿ ದೇವಸ್ಥಾನ ವಿಶಾಲವಾದದ್ದು; ದೇವಸ್ಥಾನದ ಹೊರ ಆವರಣದಲ್ಲಿ ನಜೀರ್ ಸಾಬರ ಕೈ ಪಂಪು, ದೇವಸ್ಥಾನದ ಗರ್ಭಗುಡಿ ಚಿಕ್ಕದಾಗಿದ್ದರೂ ಹಾಲ್ ಮಾತ್ರ ವಿಶಾಲವಾಗಿದೆ. ದೇವಸ್ಥಾನದ ಒಳಗಡೆ ಹಾಲ್‌ನಲ್ಲಿ ಕಾರ್ಯಕ್ರಮ ಮಾಡಿದರೆ ಹೊಲೇರ ಹೆಂಗಸರು ಒಳಗೆ ಬರೋಹಾಗಿಲ್ಲ, ಅಂಟುಗಿಂಟು ಆದ ಮೇಲ್ಜಾತಿಯ ಹೆಂಗಸರೂ ಒಳಗೆ ಬರುವ ಹಾಗಿಲ್ಲ; ಆದ್ದರಿಂದ ಹೊರ ಆವರಣವೇ ಸೂಕ್ತವೆಂದು ತೀರ್ಮಾನಿಸಿದರು.

ಕಾರ್ಯಕ್ರಮದ ದಿನ ಅಧಿಕಾರಿಗಳು ಒಂದು ಗಂಟೇ ಮೊದಲೇ ಬಂದು ಸಿನಿಮಾ ತೋರಿಸಲು, ಟಿ.ವಿ., ವಿ.ಸಿ.ಪಿ., ಬ್ಯಾನರು ಘುಂತಾದವುಗಳನ್ನೆಲ್ಲಾ ಇಳಿಸತೊಡಗಿದಂತೆ ಹುಡುಗರ ಪಟಾಲಂ ಸೇರತೊಡಗಿತು. ಚಂದ್ರಮ್ಮ ತುರುಬು ಕಟ್ಟಿ, ಹುಬ್ಬು ತೀಡಿ, ಕೈಗೆ ಎರಡೆರಡು ಚಿನ್ನದ ಬಳೆ ಏರಿಸಿ, ಎರಡೆಳೆಯ ಚಿನ್ನದ ಚೈನು ಹಾಕಿಕೊಂಡು, ಟೈಂಗೆ ಸರಿಯಾಗಿ ದೇವಸ್ಥಾನದ ಹತ್ತಿರ ಬಂದ್ಲು.

ರತ್ನ ಊರಿನವರೆಲ್ಲರಿಗೂ ಪ್ರೀತಿಪಾತ್ರಳಾದ ಮೂಗು ಹುಡುಗಿ. ಯಾರಾದರೂ ಮಾತನಾಡಿಸಿದ್ರೆ ದೊಡ್ಡದಾಗಿ ನಗುತ್ತಾ, ತನ್ನದೇ ಆದ ಭಾಷೆಯಲ್ಲಿ ಮಾತನಾಡುತ್ತಾ, ವಯಸ್ಸಿಗೆ ಮೀರಿ ಬೆಳೆದಿದ್ದಳು. ಲಂಗ ಮತ್ತು ದೊಡ್ಡದಾದ ಒಂದು ಷರ್ಟ್ ಹಾಕಿಕೊಳ್ಳುತ್ತಿದ್ದಳು. ಊರಿಗೆ ಯಾರಾದರೂ ಹೊಸಬರು ಬಂದರೆ, ಅವರಿಗೆ ಬೇಕಾದವರ ಮನೆ ತೋರಿಸುವುದು, ಕರೆಯುವುದು ಅವಳ ಕೆಲಸ. ಬೆಳಿಗ್ಗೆಯಿಂದಲೇ ದೇವಸ್ಥಾನ ಸುತ್ತುತ್ತಿದ್ದ ರತ್ನಮ್ಮ, ಚಂದ್ರಮ್ಮ ದೇವಸ್ಥಾನದ ಬಳಿ ಬಂದ ಕೂಡಲೆ ಅವಳ ಹಿಂದೆ ಸುತ್ತತೊಡಗಿದಳು.

ಹೇಳಿದ್ದ ಟೈಂಗೆ ಸರಿಯಾಗಿ ಹೊಲೇರ ಹಟ್ಟಿಯ ಹೆಂಗಸರೆಲ್ಲಾ ಗುಂಪುಗುಂಪಾಗಿ ಬರತೊಡಗಿದರು. ಅಧಿಕಾರಿಗಳಿಗೆ ಜನ ಬರುತ್ತಿರುವುದು ನೋಡಿ ಸಂತೋಷವಾಯಿತು. ಬಂದ ಹೆಂಗಸರು ದೇವಸ್ಥಾನವಾದುದರಿಂದ ಎಲ್ಲಿ ಕುಳಿತುಕೊಳ್ಳುವುದೆಂದು ತೋಚದೆ, ನಿಲ್ಲುವುದೇ ಸರಿಯೆಂಬ ತೀರ್ಮಾನದಿಂದ ನಿಂತೇ ಇದ್ದರು. ಬಹಳ ಹೊತ್ತು ನಿಲ್ಲಲಾರದ ವಯಸ್ಸಾದ ಮಹಿಳೆಯರು ಕಟ್ಟೆಯ ಕೆಳಗಡೆ ಸಲೀಸಾಗಿ ಕುಳಿತುಕೊಂಡರು. ಅಕ್ಷರ ಕಲಿತ ಹುಡುಗಿಯರು ಕಟ್ಟೆ ಮೇಲೆ ಕುಳಿತುಕೊಳ್ಳಲಾರದೆ, ಕೆಳಗೂ ಕುಳಿತುಕೊಳ್ಳಲಾರದೆ ಒದ್ದಾಡುತ್ತಲೇ ಇದ್ದರು.

ಅವರ ಗೊಂದಲಕ್ಕೆ ಪರಿಹಾರ ಸೂಚಿಸಲಾಗದೆ ಅಧಿಕಾರಿಗಳು ಸಣ್ಣಪುಟ್ಟ ಕೆಲಸದ ನೆಪ ಹುಡುಕಿ ಅಲ್ಲಿಂದ ಎದ್ದು, ಅಲ್ಲಿ ಇಲ್ಲಿ ಓಡಾಡತೊಡಗಿದರು. ಬೀದಿಯಲ್ಲಿ ನಿಂತಿದ್ದ ಚಂದ್ರಮ್ಮ, "ಹಟ್ಟಿ ಹೆಂಗಸರೆಲ್ಲಾ ಬಂದ್ರು ನಮ್ಮವಕ್ಕೆ ಏನಾಗಿದೆಯೋ? ಇವಕ್ಕ ಮನೆಮನೆಗೆ ಬಂದು ಕರೀಬೇಕು. ಮನೆಯಿಂದ ಹಸು ಅಟ್ಟಿಕೊಂಡು ಹೊರಗೆ ಬರುತ್ತಿದ್ದ ದೇವಸ್ಥಾನದ ಎದುರುಮನೆಯ ರಾಮಾಂಜಿ ಹೆಂಡತಿಗೆ ಈ ಹಸಾನ ಹೊಲದಲ್ಲಿ ಕಟ್ಟಿಹಾಕಿ ಬಿರ್ರನೆ ಬಾ" ಎನ್ನುತ್ತಾ ದೇವಸ್ಥಾನದ ಆವರಣದೊಳಗೆ ಬಂದಳು.

ಹೊಲೇರ ಹಟ್ಟಿಯ ಓದಿದ ಹೆಣ್ಣುಮಕ್ಕಳು ಗುಂಪಾಗಿ ನಿಂತಿರುವುದನ್ನು ನೋಡಿ, "ಯಾಕೆ ಹಂಗೆ ಕಂಬಗಳಂಗೆ ನಿಂತುಕೊಂಡಿದೀರು? ಕುಳಿತುಕೊಳ್ಳಿ ಎಂದು ಹೇಳಿದಳೇ ವಿನಃ, ಎಲ್ಲಿ ಎಂದು ನಿರ್ದಿಷ್ಟವಾಗಿ ಸೂಚಿಸಲಿಲ್ಲ. ಅಕ್ಷರ ಕಲಿತ ಹೊಲೇರ ಹೆಣ್ಣುಮಕ್ಕಳು, ಚಂದ್ರಮ್ಮ ಅಷ್ಟು ಹೇಳಿದ್ದೆ ತಡ ಕಟ್ಟೆಯ ಅಂಚನ್ನು ಹಿಡಿದು ಸಾಲಾಗಿ ಕುಳಿತುಕೊಂಡರು.

ದೇವಸ್ಥಾನದ ಹೊರಾವರಣದ ಒಂದು ಭಾಗದಲ್ಲಿ ಹೆಬ್ಬಾಗಿಲು, ಇನ್ನೊಂದು ಭಾಗದಲ್ಲಿ ನಾಲ್ಕು ಛೇರು, ಮೇಜು, ಇನ್ನುಳಿದ ಎರಡು ಭಾಗದಲ್ಲಿ ಕುಳಿತ ಹೊಲೇರ ಹೆಣ್ಣುಮಕ್ಕಳು, ಸೆಂಟರ್‌ನಲ್ಲಿ ಮಾತ್ರ ಖಾಲಿ ಜಾಗ. ಅಧಿಕಾರಿಗಳು, ಟೈಂ ಆಗುತ್ತೆ, ಎಲ್ಲರನ್ನೂ ಕರೀರಮ್ಮ ಎಂದು ಒತ್ತಾಯಿಸತೊಡಗಿದರು. ಚಂದ್ರಮ್ಮ, "ಎಷ್ಟು ಅಂತ ಕರಿಯೋಣ ಸಾರ್, ಬರ್ದೇ ಇರೋರನ್ನ ಬಲವಂತವಾಗಿ ಎಳೆದುಕೊಂಡು ಬರಲು ಸಾಧ್ಯವಾಗುತ್ತಾ, ನಾನು ಹದಿನೈದು ದಿನದಿಂದ ಮನೆಮನೆ ತಿರುಗಿ ಹೇಳ್ತಾನೆ ಇದ್ದೀನಿ. ನಮ್ಮ ಊರಿನ ಹೆಂಗಸರಿಗೆ ಬಲೇ ಗಾಂಚಾಲಿ. ಇವುಗಳ ಹತ್ರ ಎಷ್ಟು ಬಡಕೊಂಡ್ರು ಅಷ್ಟೇ" ಎಂದು ಎತ್ತರಿಸಿದ ದನಿಯಲ್ಲಿ ಹೇಳಿದಾಗ, ಅಧಿಕಾರಿಗಳು ನಿರುತ್ತರರಾಗಿ, ಸ್ವಲ್ಪ ಹೊತ್ತು ಬಿಟ್ಟು ದನಿ ತಗ್ಗಿಸಿ, "ಆ ಕಡೆಯವರೆಲ್ಲ ಬಂದಿದ್ದಾರೆ, ಇಲ್ಲಿ ಇರುವವರೆಲ್ಲಾ ಬಂದರೆ ಕಾರ್ಯಕ್ರಮ ಶುರುಮಾಡಬಹುದು. ಆಮೇಲೆ ಕರೆಂಟು ಹೋದ್ರೆ ಸಿನಿಮಾ ತೋರಿಸಲು ಆಗಲ್ಲ" ಎಂದು ಮೆತ್ತಗೆ ನುಡಿದರು.

"ಅದಕ್ಕೆ ನಾನೇನು ಮಾಡೋಕಾಗುತ್ತೆ? ನಾನು ಕರೆಯುವಷ್ಟು ಕರೆದಿದ್ದೇನೆ. ಒಂದು ಕೆಲ್ಸ ಮಾಡಿ, ಮೊದಲೇ ಪಿಕ್ಚರ್ ಹಾಕಿ, ಅದನ್ನು ನೋಡಿ ಹೆಂಗಸರು ಬರ್ತಾರೆ" ಎಂದು ಒಂದು ಸಜೇಷನ್ ನೀಡಿದ್ಲು. ಮೊದಲು ಸಿನಿಮಾ ತೋರಿಸುವುದೇ ಸರಿಯೆಂದು,

ಹೊರಗಡೆ ಬೆಳಕು ಜಾಸ್ತಿ ಇದ್ದುದರಿಂದ ಗರ್ಭಗುಡಿಯ ಆಚೆಯಿದ್ದ ದೊಡ್ಡ ಹಾಲ್‌ನ ಮಧ್ಯದಲ್ಲಿ, ಟಿ.ವಿ., ವಿ.ಸಿ.ಪಿ. ಜೋಡಿಸತೊಡಗಿದರು. ಟಿ.ವಿ., ವಿ.ಸಿ.ಪಿ. ಕಾಣುತ್ತಿದ್ದಂತೆ ಹುಡುಗರ ದಂಡು ಬಂದು ಮುತ್ತಿಗೆ ಹಾಕಿತು.

ಗಲಾಟೆ ಮಾಡುತ್ತಿದ್ದ ಹುಡುಗರನ್ನು ಗದರಿಸಿ ಟಿ.ವಿ. ಪ್ರಾರಂಭಿಸುತ್ತಿದ್ದಂತೆ, ಆಟೋಮೆಟಿಕ್ ಆಗಿ ಸೀಟ್ ಅಡ್ಜಸ್ಟ್‌ಮೆಂಟ್ ನಡದೇ ಹೋಯಿತು. ಯಾರ ನಿರ್ದೇಶನವೂ ಇಲ್ಲದೆ, ಮೇಲುಜಾತಿಯ ಎಳೆಯ ಮಕ್ಕಳು ದೇವಸ್ಥಾನದ ಒಳಗಿನ ಹಾಲ್‌ನಲ್ಲಿ ಸಾಲಾಗಿ ಕುಳಿತುಕೊಂಡರು. ಒಳಗೆ ಹೋಗಬಹುದಾದ ಮೇಲುಜಾತಿಯ ಮಹಿಳೆಯರು ಹಾಲ್‌ನಲ್ಲಿ ಅಕ್ಕಪಕ್ಕ ಕುಳಿತರು. ದೇವಸ್ಥಾನದ ಹೊಸಿಲಿನಿಂದೀಚೆ - ಹೊಲೇರ ಹಟ್ಟಿಯ ಮಕ್ಕಳು ಸಾಲಾಗಿ ಕುಳಿತರೆ ಅವರ ಹಿಂದೆ ಹೊಲೇರ ಹೆಣ್ಣು ಮಕ್ಕಳು ಜರಗಿಕೊಂಡರು.

ಸರ್ಕಾರಿ ಯೋಜನೆಗಳನ್ನು ಕುರಿತ ಆ ಸಿನಿಮಾವನ್ನು ಯಾರು ನೋಡದಿದ್ದರು ಮೊದಲಿಗೆ ಬಂದ ಹೆಣ್ಣುಮಕ್ಕಳು ಶ್ರದ್ಧೆಯಿಂದ ಕುಳಿತು ನೋಡಿದರು. ಅರ್ಧ ಗಂಟೆಯ ಸಿನಿಮಾ ಮುಗಿಯುವ ವೇಳೆಗ ಸಾಕಷ್ಟು ಹೆಂಗಸರು ಬಂದಿದ್ದರು. ಸಿನಿಮಾ ಮುಗಿಯುತ್ತಿದ್ದ ಹಾಗೆ, ಹುಡುಗರ ದಂಡನ್ನು ಬಲವಂತದಿಂದ ಹೊರಗಟ್ಟಿ, ಮೊದಲಿನ ಹಾಗೆ, ಹೆಂಗಸರು ತಮ್ಮ ತಮ್ಮ ಜಾಗದಲ್ಲಿ ಕುಳಿತುಕೊಂಡರು. ಅಂಚಿನ ಸುತ್ತಲು ಹಟ್ಟಿಯ ಹೆಣ್ಣುಮಕ್ಕಳು ಕುಳಿತಿದ್ದರಿಂದ, ಮೇಲು ಜಾತಿಯ ಇತರ ಹೆಂಗಸರು ಬಂದಾಗ, ಈ ಹೆಂಗಸರು ಮೈಮುದುಡಿ ತಮ್ಮ ಸೆರಗನ್ನು ಎಳೆದುಕೊಂಡು, ಅವರಿಗೆ ಸೆಂಟರ್‌ಗೆ ಬರಲು ಜಾಗಬಿಟ್ಟು ಪುನಃ ಆರಾಮಾಗಿ ಮೈ ಸಡಿಲಬಿಟ್ಟು ಕುಳಿತುಕೊಳ್ಳುತ್ತಿದರು.

ಅಧಿಕಾರಿಗಳು ಚಂದ್ರಮ್ಮನ ಅನುಮತಿಯನ್ನು ಪಡೆದು ಕಾರ್ಯಕ್ರಮವನ್ನು ಪ್ರಾರಂಭಿಸಿದರು. ಚಂದ್ರಮ್ಮನವರ ಸಹಕಾರ, ಗ್ರಾಮದ ಅಭಿವೃದ್ಧಿಯ ಬಗ್ಗೆ ಅವರಿಗಿರುವ ಕಾಳಜಿ, ಧೈರ್ಯವನ್ನು ಕೊಂಡಾಡಿ, ತಮ್ಮ ಹಿರಿಯ ಅಧಿಕಾರಿಯನ್ನು ಜನರಿಗೆ ಪರಿಚಯಿಸಿದರು.

ಹಿರಿಯ ಅಧಿಕಾರಿ ಮಹಿಳೆಯರಿಗೆ ಕೇಂದ್ರ ಸರ್ಕಾರ ಹಮ್ಮಿಕೊಂಡ ಯೋಜನೆಗಳನ್ನು ವಿವರಿಸಿ, ಸಾಮಾನ್ಯ ಮಹಿಳೆಯರಿಗೆ ಹಾಗೂ ಹಿಂದುಳಿದ ಪರಿಶಿಷ್ಟವರ್ಗದ ಮಹಿಳೆಯರಿಗೆ ಇರುವ ವಿಶೇಷ ಸಬ್ಸಿಡಿಯನ್ನು ಕುರಿತು ಹೇಳಿ, ಈ ಗ್ರಾಮದ ತಾಯಂದಿರು ಹೆಚ್ಚಿನ ಸಂಖ್ಯೆಯಲ್ಲಿ ಸೇರಿರುವುದನ್ನು ಮೆಚ್ಚುತ್ತಾ, ಮಹಿಳೆಯರಿಗಾಗಿ ಇರುವ ಸರ್ಕಾರದ ಯೋಜನೆಗಳನ್ನು ಉಪಯೋಗಿಸಿಕೊಳ್ಳಬೇಕೆಂದು ಮನವಿಮಾಡಿ ಕುಳಿತುಕೊಳ್ಳುತ್ತಿದ್ದ ಹಾಗೆ, ಕೆಂಪಮ್ಮ 'ಅಲ್ಲ ಸಾ, ಎಲ್ಲಾನು ಅವರಿಗೆ ಕೊಡ್ತೀವಿ ಕೊಡ್ತೀವಿ ಅಂತೀರಲ್ಲಾ, ನಮ್ಮ ಜನರಾಗೆ ಬಡವರ್‍ಯಾರು ಇಲ್ವೇ? ನಾವು ರಟ್ಟೆಮುರಿದು ಗೈದ್ರೆ ಹಿಟ್ಟುಬಟ್ಟೆ ಕಾಣಾದು. ಸರ್ಕಾರದವರು ಅವರಿಗೆ ಕೊಟ್ಟುಕೊಟ್ಟು ಅವರು ಉದ್ಧಾರ ಆಗಿರುವುದು ನಾವು ಕಂಡಿಲ್ವಾ? ಅವರಿಗೆ ಎಷ್ಟುಕೊಟ್ರೂ ಅಷ್ಟೆ?' ಎಂದಳು. ಅವಳು ಇನ್ನು ಏನೊ ಮುಂದೆ ಹೇಳಬೇಕು ಅನ್ನುವಷ್ಟರಲ್ಲಿ ಅವಳ ಪಕ್ಕದಲ್ಲಿ ಕುಳಿತ ನಂಜಮ್ಮ ಕೆಂಪಮ್ಮನ ಮೂತಿ ತಿವಿಯುತ್ತಾ, "ಅವರು ಏನೋ ಹೇಳಲು ಬಂದಿದ್ದಾರೆ, ಅವರು ಹೇಳೋದನ್ನ ಹೇಳಿ ಹೋಗ್ಲಿ" ಅಂತ ಹೇಳುತ್ತಿದ್ದ ಹಾಗೆ ಕೆಂಪಮ್ಮ, "ಯಾಕೆ ಹೇಳಬಾರ್‍ದು, ನೀನು ತಿಕಾಮುಚ್ಕಂಡು ಸುಮ್ನಿರು, ನಾನು ಹೇಳಿದ್ರೆ ನಿನಗೇನು ನಾವು ಬಂದಿರೋದೆ ಕೇಳೋಕೆ" ಕೈಮಾಡಿ ಗದರಿದ್ಳು. ಈ ಮಾತನ್ನು ಕೇಳಿದ ಹೊಲೇರ ಹಟ್ಟಿ ಹೆಣ್ಮಕ್ಕಳು ಅವರವರಲ್ಲೇ ಸ್ವಲ್ಪ ಹೊತ್ತು ಗುಸುಗುಸು ಮಾತನಾಡುತ್ತಾ, ಕೊನೆಗೆ ನಿನಗೇನು? ನಿನ್ನ ಮನೆಯಿಂದ ಕೊಡ್ತೀಯಾ? ಸರ್ಕಾರ ಕೊಡುತ್ತೆ, ನಾವು ತಗೋತೀವಿ? ಏನು ನಿನ್ನ ಮನೆಮುಂದೆ ಭಿಕ್ಷೆ ಕೇಳಾಕೆ ಬಂದಿದೀವಾ" ಎಂದು ಒಟ್ಟಾಗಿ ಮೂಗು ಮುರಿಯತೊಡಗಿದರು.

ಸಭೆಯಲ್ಲಿ ಗದ್ದಲ ಜಾಸ್ತಿಯಾಗುತ್ತಿದ್ದ ಹಾಗೆ, ಅವರನ್ನು ಬಲವಂತದಿಂದ ಸುಮ್ಮನಿರಿಸಿದ ಅಧಿಕಾರಿಗಳು, ಸಾಮಾನ್ಯ ಮಹಿಳೆಯರಿಗೆ ಸಿಗುವ ಸೌಲಭ್ಯಗಳನ್ನು ಒತ್ತಿ ಹೇಳಿದರು. ಕೆಂಪಮ್ಮ ಮತ್ತೆ ಸುಮ್ಮನಿರಲಾರದೆ, 'ಹಿಂದೆ ನಿಮ್ಮಂತವರ ಮಾತು ಕೇಳಿ ಬ್ಯಾಂಕಿಗೆ ಹೋಗಿದ್ವಿ, ಆ ಬ್ಯಾಂಕಿನವರು "ಮೊದಲು ನಿಮ್ಮ ಮಾವ, ಗಂಡ, ಮೈದ್ನ ಮಾಡಿರ ಸಾಲ ತಂದು ವಾಪಸ್ಸು ಕಟ್ಸು" ಅಂತ ಗದರಿ ಹೊರಗಟ್ಟಿದ, ಈ ಗಂಡಸರು ಸಾಲ ಮಾಡುವಾಗ ನಮ್ಮನ್ ಏನಾದ್ರು ಕೇಳಿ ಸಾಲ ಮಾಡಿದ್ರಾ? ನಮ್ಮ ಮನೆಯವುದು ಯಾವ ಸಾಲಾನು ಇಲ್ಲ ಸ್ವಾಮಿ ಅಂತ ನಾನು ವಸಿ ಧೈರ್ಯ ಮಾಡಿ ಬಾಯಿ ತೆಗೆದದ್ದಕ್ಕೆ, "ನಿಮ್ಮ ಊರಲ್ಲಿ ದುಪಲ್ಪರ್ಸ್ ಬಾಳಾ ಜನ ಅವ್ರೆ. ಹಂಗೆ ಕೊಡಾಕೆ ಬರಾಕಿಲ್ಲ" ಅಂತೆ ಹೇಳಿದ್ರು. ಚಂದ್ರಮ್ಮನ ಕಡೆ ಕೈ ತೋರಿಸುತ್ತಾ, "ಇಂತವರು ಇದಾರಲ್ಲ, ಇವರು ಒಳಗೊಳಗೆ

ತಮಗೆ ಬೇಕಾದವರಿಗೆ ಕೊಡಿಸಿಕೊಡ್ತಾರೆ." ಈ ಮಾತನ್ನು ಕೇಳಿದ ಚಂದ್ರಮ್ಮ ಕೆರಳಿ ಕಣ್ಣು ಕೆಂಪಗೆ ಮಾಡಿಕೊಂಡು, "ನಾಲಿಗೆ ಬಿಗಿಹಿಡಕೊಂಡು ಮಾತಾಡು, ಒಳಗೊಳಗೆ ಯಾರಿಗೆ ಸಾಲ ಕೊಡ್ಸಿದೀವಿ. ಸಾಲ ತಗಂಡವರು ನೆಟ್ಟಗೆ ಕಟ್ಟಿದರೆ, ಬ್ಯಾಂಕ್‌ನವರು ಕೊಡ್ತಾರೆ. ಅದು ಬಿಟ್ಟು ಕೊಡಿಸುವಾಗ ಕೈಕಾಲು ಹಿಡಿದುಕಂಡು, ವಾಪಸ್ಸು ಕಟ್ಟಬೇಕಾದಾಗ, ಕಟ್ತೀವಿ ಹೋಗು; ಏನು ನಿಮ್ಮಪ್ಪನ ಮನೆಯಿಂದ ತಂದು ಕೊಟ್ಟಿದೀಯಾ? ಅಂತ ಕೇಳ್ತೀರಿ" ಎಂದವಳು ಅಧಿಕಾರಿಗಳ ಕಡೆ ತಿರುಗಿ, "ಸಾರ್, ಸಾಲದ ಸಮಾಚಾರ ಮಾತ್ರ ಎತ್ತಬೇಡಿ" ಎಂದು ಕೋಪಿಸಿಕೊಂಡ್ಲು. "ಬೇರೆ ಏನಾದ್ರೂ ಇದ್ರೆ ಹೇಳಿ, ಇಲ್ಲದೆ ಇದ್ರೆ ಈ ಪಂಕ್ಷನ್ ಮುಗಿಸಿಬಿಡಿ" ಎನ್ನುತ್ತಾ, ಅಲ್ಲೇ ನಿಂತಿದ್ದ ಹುಡುಗರಿಗೆ, "ಹೋಗ್ರೋ ತಿಂಡಿ ಆಗಿದ್ರೆ ಎತ್ತಿಕೊಂಡು ಬನ್ನಿ" ಎಂದು ಆರ್ಡರ್ ಮಾಡಿದಳು. ಅಧಿಕಾರಿಗಳು ಸಭೆ ದಾರಿ ತಪ್ಪುತ್ತಿದ್ದುದನ್ನು ನೋಡಿ ಹಸನ್ಮುಖದಿಂದಲೇ ಸಮ್ಮತಿಸಿದರು.

ತಿಂಡಿ ಬರುವುದಕ್ಕೂ, ಆ ಊರಿನ ಪ್ರೈಮರಿ ಸ್ಕೂಲು ಬಿಡುವುದಕ್ಕೂ ಸರಿ ಹೋಯಿತು. ಹೊಲೇರ ಹಟ್ಟಿಯ ಮಕ್ಕಳೆಲ್ಲಾ, ತಮ್ಮ ತಾಯಂದಿರು ದೇವಸ್ಥಾನ ಬಳಿ ಇದ್ದುದರಿಂದ ಮನೆಗೆ ಹೋಗದೇ, ನೇರವಾಗಿ ದೇವಸ್ಥಾನದ ಬಳಿ ಬಂದರು. ಚಂದ್ರಮ್ಮ ಹಾಗೂ ಇಬ್ಬರು ಹೆಂಗಸರು, ಒಣಗಿದ ಮುತ್ತುಗದ ಎಲೆಯನ್ನು ಅರ್ಧ ಮಾಡಿ ಸೆಂಟರ್‌ನಲ್ಲಿ ಕುಳಿತಿದ್ದ ಹೆಂಗಸರಿಗೆ ಹಾಗೂ ಅವರ ಮಕ್ಕಳಿಗೆ ಮೊದಲು ಹಂಚಿದರು. ಉಳಿದ ಕೆಲವೇ ಎಲೆಗಳ್ನು ಹೊಲೇರ ಹಟ್ಟಿಯ ಹೆಣ್ಮಕ್ಕಳ ಮುಖನೋಡಿ ಕೆಲವರಿಗೆ ಹಂಚಿದರು.

ತಮಗೆ ಎಲೆಗಳು ಇಲ್ಲದಿರುವುದನ್ನು ನೋಡಿದ ಹೆಂಗಸರು, ಮಕ್ಕಳು ದೇವಸ್ಥಾನದ ಎದುರಿಗಿದ್ದ ಹರಳಿನ ಗಿಡಕ್ಕೆ ಮುತ್ತಿಗೆ ಹಾಕಿದರು. ಚಿತ್ರಾನ್ನದ ಪಾತ್ರೆ ಬರುತ್ತಲೇ, ಹೆಂಗಸರು, ಮಕ್ಕಳು, ಒಂದು ಹಿಡಿ ಅನ್ನಕ್ಕೆ ನಕ್ಷತ್ರಾಕಾರದ ಎಲೆಗಳ್ನು ಹಿಡಿದುಕೊಂಡು, ನುಗ್ಗಾಡತೊಡಗಿದರು. ಎಲೆಯಲ್ಲಿ ನಿಲ್ಲಲಾಗದ ಚಿತ್ರಾನ್ನವನ್ನು ಸೀರೆಯ ಸೆರಗಿನಲ್ಲಿ ಮಡಿಚಿಕೊಳ್ಳುತ್ತಿದ್ದರು. ಹರಳಿ ಎಲೆಗಳು ಮುಗಿದ ಮೇಲೆ ಹುಡುಗರು ಅಲ್ಲಲ್ಲಿ ಬಿದ್ದ ಕಾಗದದ ತುಂಡುಗಳನ್ನು ಆಯ್ದು ತಂದು ಕೈಯೊಡ್ಡುತ್ತಿದ್ದರು. ಈ ಗಲಾಟೆಯನ್ನು ನೋಡಿದ ಚಂದ್ರಮ್ಮ, 'ಮೀಟಿಂಗ್‌ಗೆ ಬನ್ನಿ ಎಂದ್ರೆ, ತಿನ್ನಾಕೆ ಸಿಗುತ್ತೆ ಅಂತ ಹುಡುಗರು ಮಕ್ಕಳನ್ನೆಲ್ಲಾ ಕರೆದುಕೊಂಡು ಬರ್ತೀರಲ್ಲಾ' ಎಂದು ಗದರಿದ್ದನ್ನು ಕಂಡು, ಚಿತ್ರಾನ್ನ ಹಾಕಿಸಿಕೊಳ್ಳಲು ಬಿಚ್ಚಿದ್ದ ನಕ್ಷತ್ರದಾಕಾರದ ಎಲೆಯನ್ನು ಅಲ್ಲೇ ಬಿಸಾಕಿ, "ನಾವೇನು ಗತಿ ಇಲ್ದೆ ಮೀಟಿಂಗ್‌ಗೆ ಬರ್ಲಿಲ್ಲ. ಜಯಮ್ಮ ಬರ್ಲೇಬೇಕು ಅಂತ ಕರೆದಿದ್ದಕ್ಕೆ ಬಂದ್ವಿ. ಮೀಟಿಂಗ್‌ಗೆ ಮಾತ್ರ ನಾವು ಬೇಕು? ಶಾಲೆ ಬಿಟ್ಟಿದ್ದಕ್ಕೆ ಹುಡುಗರು ನಮ್ಮನ್ನ ಹುಡುಕಿಕೊಂಡು ಇಲ್ಲಿ ಬಂದಿದ್ದಾರೆ. ಮನೆಯಲ್ಲಿ ಯಾರು ಇಲ್ಲ? ಇನ್ನೂ ಅವು ಎಲ್ಲಿ ಹೋಗ್ತಾವೆ?" ಎಂದು ದನಿ ಎತ್ತರಿಸಿ, ಬನ್ರೋ ಎಂದು ಕೈಕೊಡವಿ ಹೊರಟಳು. ಅವಳ ಜೊತೆಗಿದ್ದ ಇತರ ಹೆಂಗಸರು ಜಯಮ್ಮನನ್ನು ತರಾಟೆಗೆ ತೆಗೆದುಕೊಂಡರು. 'ನೀನೆ ಹೊಟ್ಟೆತುಂಬಾ ತಿಂದುಕೊಂಡು ಬಾ' ಎಂದು ತಿಂಡಿ ತಿನ್ನದೆ ಹೊರಟರು.

ಜಯಮ್ಮ ಅವರನ್ನು ಹೋಗದಂತೆ ಗೋಗರೆಯುತ್ತಾ, ಅವರ ಹಿಂದೆಯೇ ನಡೆದಳು. ಅವಳ ಮಾತನ್ನು ಲೆಕ್ಕಿಸದೇ, ಹೆಂಗಸರು ಮುಂದೆ ಹೊರಟೇ ಹೋದರು. ತಾನು ಅವರ ಜೊತೆಗೆ ಹೋಗ್ಬೇಕೆ, ಬೇಡವೆ? ಎಂಬ ಗೊಂದಲದಲ್ಲಿ ಏನನ್ನು ತೀರ್ಮಾನಿಸಲಾಗದೆ, ನಡು ಮಧ್ಯದ ರಸ್ತೆಯಲ್ಲಿ ಜಯಮ್ಮ ನಿಂತುಬಿಟ್ಟಳು. ಅವಳು ನಡುದಾರಿಯಲ್ಲಿ ನಿಂತಿದ್ದನ್ನು ನೋಡಿದ ಚಂದ್ರಮ್ಮ, 'ನೀನು ಬಾರೆ ಜಯಮ್ಮ, ಅವಕ್ಕೆ ಕೊಬ್ಬು, ಹೋದ್ರೆ ಹೋಗ್ತಾರೆ. ತಿನ್ನೋರು ತಿಂತಾರೆ' ಎಂದು ರಾಗವೆಳೆದು ಕರೆದಳು. ಹಿರಿಯ ಅಧಿಕಾರಿಗಳು "ಹೀಗೆಲ್ಲಾ ಮಾಡಬಾರದಮ್ಮ, ಎಲೆ ತರ್ಸಿ ಮಕ್ಕಳಿಗೂ ಅಷ್ಟಿಷ್ಟು ಕೊಟ್ಟಿದ್ರೆ ಆಗಿರುತ್ತಿತ್ತು. ಎನ್ನುತ್ತಿದ್ದ ಹಾಗೆಯೆ, "ಅಯ್ಯೋ ಬಿಡಿ ಸಾರ್, ಅವರನ್ನು ಎಲ್ಲಿ ಇಡಬೇಕೊ ಅಲ್ಲಿ ಇಡಬೇಕು, ಇಲ್ಲದಿದ್ದರೆ ತಲೇಮೇಲೆ ಕುಳಿತ್ಕೋತಾರೆ" ಎನ್ನುತ್ತಾ, ಸೆಂಟರ್‌ನಲ್ಲಿ ಕುಳಿತಿದ್ದ, ಹೆಂಗಸರಿಗೆ ಹಾಗೂ ಮಕ್ಕಳಿಗೆ ಮೊದಲೇ ನೀಡಿದ ಎಲೆಗೆ ಬಡಿಸತೊಡಗಿದರು.

ಸ್ನಾನಮಾಡಿ, ನೀಟಾಗಿ ತಲೆ ಬಾಚಿ, ಕುಂಕುಮವಿಟ್ಟು ಬಂದಿದ್ದ ಸುನಂದಮ್ಮ ಅಲ್ಲಿರುವ ಮಹಿಳೆಯರಿಗಿಂತ ಸ್ವಲ್ಪ ತಿಳುವಳಿಕೆಯುಳ್ಳವರು. ಅವರು ಎದ್ದು ಅಧಿಕಾರಿಗಳಿಗೆ ಕೈಮುಗಿಯುತ್ತಾ, "ನಾವು ಇನ್ನೂ ಬರ್ತೀವಿ ಸರ್" ಎಂದರು. ಅಧಿಕಾರಿಗಳು ನೀವೂ ತಿಂಡಿತಿಂದು ಹೋಗಿ ಎಂದು ಹೇಳುತ್ತಿದ್ದ ಹಾಗೆ, "ಇಲ್ಲ, ನಮಗೆ ಬೇಡ, ಇವಳ್ನ ಬೆಂಗಳೂರಿಗೆ ಹೋಗಲು ಬಸ್ಸು ಹತ್ತಿಸಿ ಬರಬೇಕು, ಎಂದು ಪಕ್ಕದಲ್ಲೇ ನಿಂತಿದ್ದ ಚೂಡಿದಾರ ಹಾಕಿಕೊಂಡ ಮಗಳನ್ನು ತೋರಿಸಿದರು. 'ನಿಮ್ಮ ಮಗಳು ಏನು ಮಾಡ್ತೀದಾಳೆ?' ಕೇಳಿದರು ಅಧಿಕಾರಿಗಳು.

'ಬಿ.ಎಸ್‌ಸಿ. ಕಂಪ್ಯೂಟರ್ ಮುಗ್ಸಿದಾಳೆ. ಎಂ.ಎಸ್‌ಸಿ.ಗೆ ಟ್ರೈ ಮಾಡಿದ್ವಿ ಸೀಟು ಸಿಗಲಿಲ್ಲ.' "ಎಷ್ಟು ಪರ್ಸೆಂಟೇಜು ಇದೆ". ಅಧಿಕಾರಿಗಳ ಪ್ರಶ್ನೆ. ಇಂಟರ್‌ವ್ಯೂನಲ್ಲಿ 40% ಬಂದಿದೆ. ನಮ್ಮ ಎಂ.ಎಲ್.ಎ.ಗೆ ಹೇಳಿದ್ವಿ. ಅವರೂ ಮಾಡಿಸಿ ಕೊಡಲಿಲ್ಲ. ಅದಕ್ಕೆ ನಮ್ಮ ಮಗಳು, "ನಾವು S.C. ಆಗಿ ಹುಟ್ಟಬೇಕಾಗಿತ್ತು" ಅಂತ ಕೊರಗ್ತಾಳೆ. ಪಕ್ಕದಲ್ಲಿದ್ದ ಇನ್ನೊಬ್ಬ ಅಧಿಕಾರಿ, "ಸುಪ್ರೀಂ ಕೋರ್ಟ್ ಹೈಯರ್ ಎಜುಕೇಷನ್‌ನಲ್ಲಿ ಮೀಸಲಾತಿ ಇರಬಾರದು" ಎಂದು ತೀರ್ಪು ಕೊಟ್ಟಿದೆ ಎಂದು ನೆನಪಿಸಿದರು.

ಅಧಿಕಾರಿಗಳಿಗೆ ತಟ್ಟೆ ತಂದು ಊಟ ಬಡಿಸಿದರು. ಊಟ ಮಾಡಿದ ಅಧಿಕಾರಿಗಳು ಕಾರ್ಯಕ್ರಮವನ್ನು ಚೆನ್ನಾಗಿ ನಡೆಸಿಕೊಟ್ಟು ಸಹಕಾರ ನೀಡಿದ್ದಕ್ಕೆ ಕೃತಜ್ಞತೆ ಸಲ್ಲಿಸಿ ಕಾರು ಹತ್ತಿದರು. ●

**ಟಿಪ್ಪಣಿ**

ಮೀಸಲಾತಿಯನ್ನು ವಿರೋಧಿಸುವವರು ಅಸಹನೆಯುಳ್ಳವರು, 33% ಮಹಿಳಾ ಮೀಸಲಾತಿಯೊಳಗಡೆ, ಇತರ ವರ್ಗದ ದುರ್ಬಲ ಮಹಿಳೆಯರಿಗೆ ಮೀಸಲಾತಿ ಬೇಡ ಎಂದು ವಾದ ಮಂಡಿಸುವವರು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕಾಗುತ್ತದೆ.

* ಇದು ಕಥೆಯಲ್ಲ, ನೈಜ ಘಟನೆ.
* ಹೊಲೇರ ಹಟ್ಟಿಯ ಹೆಣ್ಣುಮಕ್ಕಳು ತಿಂಡಿ ತಿನ್ನದೇ ಹೋದ ಘಟನೆ ಇತರ ಜಾತಿಯ ಹೆಂಗಸರ ಮನಸ್ಸನ್ನು ಕಲಕಲಿಲ್ಲವೇಕೆ?
* ಚಂದ್ರಮ್ಮನಂತವರ ಕೈಗೆ ರಾಜಕೀಯ ಅಧಿಕಾರವೂ ದೊರೆತರೆ ಏನಾಗಬಹುದು?
* ಹೊಲೇರ ಹಟ್ಟಿಯ ಹೆಣ್ಣು ಮಕ್ಕಳು ಮೀಸಲಾತಿಯ ಸೌಲಭ್ಯವಿಲ್ಲದೆ ಅವಕಾಶವನ್ನು ಪಡೆಯಬಲ್ಲರೆ?
* ಮೀಸಲಾತಿಯೊಳಗಡೆ ಮೀಸಲಾತಿಯನ್ನು ನೀಡುವುದರಿಂದ ಮಹಿಳೆಯರ ನಡುವೆ ಈಗಾಗಲೇ ಇರುವ ಗೋಡೆಯನ್ನು ಕಳಚುವುದೆ? ಅಥವಾ ಹೊಸ ಗೋಡೆಯ ರಚನೆಯೆ?
* ಸಾಮಾನ್ಯ ಅಂಶಗಳ ಆಧಾರದ ಮೇಲೆ ಒಂದುಗೂಡುವ ಮಹಿಳೆಯರನ್ನು ವಿಭಜಿಸಿರುವ ಶಕ್ತಿಗಳನ್ನ ಮಹಿಳೆಯರು ವಿರೋಧಿಸಬೇಕಾದುದು ಅನಿವಾರ್ಯವಲ್ಲವೆ?

●

ಒರಿಸ್ಸಾದ ರುದ್ರ ಭೀಕರ ಸ್ಥಿತಿ ಎಂಥವರನ್ನು ಕರುಳು ಹಿಂಡಿ ಕಣ್ಣೀರು ಹರಿಸದೆ ಬಿಡಲಿಲ್ಲ. ಒರಿಸ್ಸಾದ ಹೃದ್ರಾವಕ ಚಂಡಮಾರುತ ಘಂಟೆಗೆ 260-270 ಕಿ.ಮೀ. ವೇಗದಲ್ಲಿ ಸತತವಾಗಿ 16 ಘಂಟೆ ಬೀಸಿದೆ. ನೈಸರ್ಗಿಕ ವಿಕೋಪ ಅಂದಾಜಿಸಲಾಗದ ಸಾವು ನೋವನ್ನು ನಷ್ಟವನ್ನು ತಂದದ್ದಲ್ಲದೆ ಒರಿಸ್ಸಾದ ಅರ್ಧ ರಾಜ್ಯ ಸರ್ವನಾಶವಾಗಿದೆ.' ಚಂಡಮಾರುತ ತಣ್ಣಗಾಗಿ 15-20 ದಿನಗಳು ಕಳೆದರೂ ಪ್ರತಿದಿನ ಸಂತ್ರಸ್ತ ಪ್ರದೇಶದಲ್ಲಿ ಸಾವಿನ ಸಂಖ್ಯೆ ಏರುತ್ತಲೇ ಇದೆ.

ಈ ಕ್ರೂರ ಚಂಡಮಾರುತ ಪರದಿಪ್‌ನಗರ, ಕುಜುಗೊ, ಏಕಸಾಮ್, ಟಿತರ್ ಹಾಗೂ ಮಹಾ ಕಲಾಪದ ನಗರಗಳಲ್ಲದೆ ಬಲ್ಲೇಶ್ವರ್ ಜಿಲ್ಲೆಯಿಂದ ಪುರಿ ಜಿಲ್ಲೆಯವರೆಗೆ ಹಬ್ಬಿತು. ಇದರಿಂದಾಗಿ 1 ಕೋಟಿ ಜನ ನಿರ್ವಸಿತರಾಗಿದ್ದಾರಲ್ಲದೆ ಬದುಕುಳಿದವರ ಸ್ಥಿತಿ ಚಿಂತಾಜನಕವಾಗಿದೆ. ಆಹಾರ ಸಾಮಗ್ರಿ, ಬೆಳೆ ಸಂಪರ್ಕ, ಪ್ರಾಣಿ ಪಕ್ಷಿಗಳ ಸರ್ವನಾಶ, ತಬ್ಬಲಿತನ ಎಲ್ಲವೂ ಜಲಾವೃತವಾಗಿ ಜೀವಸೆಲೆಯಾಗಬೇಕಾಗಿದ್ದ ನೀರು ಜೀವಿ ಸಂಕುಲವನ್ನೆ ಸೆಳೆದೊಯ್ದು ಬುಡಮೇಲು ಮಾಡಿದೆ.

# ಚಿಕ್ಕವಯಸ್ಸಿನಲ್ಲಿ ಬಲಾತ್ಕಾರ

● ಶ್ರೀಮತಿ ಆರ್. ವಿಮಲ

ಸರ್ವೋಚ್ಚ ನ್ಯಾಯಾಲಯದ ಮಾನ್ಯ ನ್ಯಾಯಾಧೀಶ ಶ್ರೀ ಆರ್. ಎನ್. ಪಾಂಡ್ಯನ್ ಮತ್ತು ಶ್ರೀ ಕೆ. ಜೆ. ರೆಡ್ಡಿ ಅವರು ಐದು ವರ್ಷ ಮಗುವಿನ ಮೇಲಿನ ಬಲಾತ್ಕಾರ ಮತ್ತು ಅತ್ತೆಯ ಮೊಕದ್ದಮೆಯಲ್ಲಿ ಭೂತಪೂರ್ವ ಪೊಲೀಸ್ ಅಧಿಕಾರಿಯ ಅಪರಾಧವನ್ನು "ಸಂದೇಹದ ಲಾಭ" ಎಂದು ಶಿಕ್ಷೆಮಾಡದೇ ಬಿಡುಗಡೆ ಮಾಡಿದ ನಿರ್ಣಯದ ವಿರುದ್ಧ ಮಹಿಳಾ ಸಂಘಟನೆಗಳು ಮುಖ್ಯನ್ಯಾಯಾಧೀಶ ಶ್ರೀರಂಗನಾಥ ಅವರಲ್ಲಿ ದೂರು ಸಲ್ಲಿಸಿ, ನಿರ್ಣಯವನ್ನು ಪುನರ್ವಿಮರ್ಶಿಸಲು ಆಗ್ರಹಿಸಿದ್ದರು. (Times of India 20-4-1991) ಅಬೋಧ ಬಾಲಿಕೆಯ ಮೇಲಿನ ಬಲಾತ್ಕಾರ ಮತ್ತು ಹತ್ಯೆಗಾಗಿ ಸೆಷನ್ ನ್ಯಾಯಾಲಯ ಮತ್ತು ಉಚ್ಚನ್ಯಾಯಾಲಯಗಳು ಅಪರಾಧಿಗೆ ಗಲ್ಲು ಶಿಕ್ಷೆ ವಿಧಿಸಿದ್ದಾಗಿತ್ತು. ಆದರೆ ಸರ್ವೋಚ್ಚ ನ್ಯಾಯಾಲಯದಲ್ಲಿ 'ಸಂದೇಹದ ಲಾಭ' ಪಡೆದು ಬಿಡುಗಡೆಯ ಆದೇಶವಾಗಿತ್ತು. ಮಹಿಳಾ ಸಂಘಟನೆಗಳು ಇಂಥದೇ ಆಗ್ರಹಪೂರ್ವಕ ದೂರನ್ನು 'ಸುಮನ್' ಮೊಕದ್ದಮೆಯಲ್ಲಿ 10 ವರ್ಷದ ಶಿಕ್ಷೆಯನ್ನು 5 ವರ್ಷಕ್ಕೆ ಇಳಿಸಿದ್ದನ್ನು ಪ್ರಶ್ನಿಸಿದ್ದರು. ಅಲ್ಲಿಯೂ ಇದೇ ರೀತಿ ಅಪರಾಧಿ ಶಿಕ್ಷೆ ಇಲ್ಲದೇ ಬಿಡುಗಡೆ ಹೊಂದಿದ. (AIR 1990 ಸರ್ವೋಚ್ಚ ನ್ಯಾಯಾಲಯ 538).

ಕಳೆದ ವರ್ಷಗಳಿಂದ ಚಿಕ್ಕವಯಸ್ಸಿನ ಬಾಲಕಿಯರ ಮೇಲೆ ಬಲಾತ್ಕಾರದ ಪ್ರಕರಣಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಿವೆ. ಇದು ನಿಜವಾಗಿಯೂ ಭಯಾದಾಹಕ ಮತ್ತು ಚಿಂತಾಜನಕವಾಗಿದೆ. ಪ್ರತಿನಿತ್ಯ ಬರುವ ಇಂಥ ಸುದ್ದಿಗಳು, ಸಮಾಜದಲ್ಲಿ ಬಲಿಯುತ್ತಿರುವ, ಬೆಳೆಯುತ್ತಿರುವ ವಿಕೃತ ಮನಸ್ಸಿನ ವ್ಯಕ್ತಿಗಳ ಬಗ್ಗೆ ಹಿಡಿದ ಕನ್ನಡಿಯಾಗಿದೆ. ಒಂದು ಕಡೆ ಗೊಂಬೆಮಾಡುವ ಮಕ್ಕಳೊಂದಿಗೆ ಬಲಾತ್ಕಾರದಂಥ ಹೇಯವಾದ, ಗಂಭೀರ ಅಪರಾಧಗಳು ನಡೆದರೆ ಅಪರಾಧಿಗಳು ಕಾನೂನಿನ ಕಪಿಮುಷ್ಠಿಯಿಂದ, ಕಳ್ಳಮಾರ್ಗಗಳಿಂದ ಹೊರಬರುತ್ತಾರೆ. ನ್ಯಾಯಾಲಯದ ಕಟಕಟೆ ಹತ್ತಿದ ಬಡವನ ಸ್ಥಿತಿ, ದಣಿದ ದೇಹ, ಮನಸ್ಸುಗಳೊಂದಿಗೆ ಮನೆಮಠ ಕಳೆದುಕೊಂಡು ದೈನ್ಯವಾಗಿರುತ್ತದೆ. ಅವನು ನ್ಯಾಯಾಲಯಕ್ಕೆ ಅಲೆದಾಡುವಲ್ಲಿ ದೈಹಿಕ ಮತ್ತು ಮಾನಸಿಕ ಹೀನಾಯ ಸ್ಥಿತಿ ಅನುಭವಿಸುತ್ತಾನೆ. ಬಲಾತ್ಕಾರಿಯು ಬಿಡುಗಡೆಯ ನಂತರ ವಿಲಾಸೆಯ ಮೇಲೆ ಕೈಹಾಕಿ, ಎದೆಯುಬ್ಬಿಸಿ ಸಮಾಜದಲ್ಲಿ ಓಡಾಡುವುದನ್ನು ನೋಡಿದ ದುಃಖ ತಂದೆಗೆ ಬೀಳಲು ಹಾಳು ಬಾವಿಯೂ ಸಿಗದು, ಏಕೆಂದರೆ ಆತ್ಮಹತ್ಯೆಯ ಪ್ರಯತ್ನದಲ್ಲಿ ಸಿಕ್ಕರೆ ಅವನೇ ಕಂಬಿಗಳನ್ನೆಣಿಸಬೇಕಾಗುತ್ತದೆ. ಶಿಕ್ಷೆ ಇಲ್ಲದೇ ಬಿಡುಗಡೆ ಮಾಡಿದರೆ (ಇದು ಎಷ್ಟನೇಯದೋ) ಮಹಿಳಾ ಸಂಘಟನೆಗಳು ವಿರೋಧಿಸುವುದು ಸ್ವಾಭಾವಿಕವೇ! ಒಂದು ವೇಳೆ ಅಪರಾಧವು ಆಗಿಯೇ ಇಲ್ಲವೆಂದಾದರೆ ಕೆಳಗಿನ ಮತ್ತು ಉಚ್ಚ ನ್ಯಾಯಾಲಯಗಳು ಶಿಕ್ಷೆ ವಿಧಿಸುವಾಗ ಕಣ್ಣು ಮುಚ್ಚಿದ್ದವೆ? ದಿಲ್ಲಿಯ ಒಬ್ಬ ಶ್ರೀಮಂತ ತಂದೆಯ ಮಗಳಿಗೆ ಹೀಗೇಯೇ ಆದಾಗ ಆಗಲೂ ಅಪರಾಧಿಯನ್ನು ಬಿಡುಗಡೆ ಮಾಡುವರೇ? ನ್ಯಾಯವು ಬಲಾತ್ಕಾರಿಗೋ, ದುಃಖಿತರಿಗೋ?

13 ವರ್ಷದ ಬಾಲಿಕೆಯ ಬಲಾತ್ಕಾರದ ಮೊಕದ್ದಮೆಯಲ್ಲಿ ಅಪರಾಧಿಗಳು ವೈದ್ಯಕೀಯ ಪರೀಕ್ಷೆ ಮಾಡಿಸದೇ, ಬಾಲಕಿಯ ವೈದ್ಯಕೀಯ ಪರೀಕ್ಷೆ ಮಾಡಿದ ವೈದ್ಯರನ್ನು ಸಾಕ್ಷಿಗೆ ಕರೆಯಲೇ ಇಲ್ಲ. ಬಾಲಕಿಯ ವಸ್ತ್ರವನ್ನು, ಇತರ ವಸ್ತುಗಳನ್ನು ವಶಪಡಿಸಿಕೊಳ್ಳಲಿಲ್ಲ. ಅಪರಾಧಿಯ ವೀರ್ಯದ ಕಲೆಗಳು ಬಟ್ಟೆಯ ಮೇಲೆ ಕಾಣಲೇ ಇಲ್ಲ ಎಂಬ ಕಾರಣದಿಂದ ಅಪರಾಧಿಗೆ ಶಿಕ್ಷೆಯಾಗಲಿಲ್ಲ (1978 ಚಾಂದ Law Reporter Delhi) ಎರಡನೇ ಮೊಕದ್ದಮೆಯಲ್ಲಿ 6 ವರ್ಷದ ಬಾಲಕಿಯ ಮೇಲೆ ಬಲಾತ್ಕಾರ ಮಾಡಿ ಹತ್ಯೆ ಮಾಡಲಾಗಿತ್ತು, ಆದರೆ ನ್ಯಾಯಾಲಯವು 'ಬೇರೆಯವರು ಮಾಡಿರುವ ಸಾಧ್ಯತೆಗಳಿವೆ' ಎಂದು ಹೇಳಿ ಅಪರಾಧಿಯನ್ನು ಬಿಡುಗಡೆ ಮಾಡಿತ್ತು. (1972 ಜಸ್ಥಾನ ಫೌಜದಾರಿ ಕೇಸ್ 355)

ಮತ್ತೊಂದು ಮೊಕದ್ದಮೆಯಲ್ಲಿ ಅಲ್ಪವೇಲು ಬಾಲಕಿಯ ಬಲಾತ್ಕಾರ ಮತ್ತು ಹತ್ಯೆ ಪ್ರಕರಣದಲ್ಲಿ ಹೆಣ ಅಪರಾಧಿಯ ಮನೆಯಲ್ಲೇ ದೊರೆತಿತ್ತು. ಬಾಲಕಿಯ ಒಳಉಡುಪು ಅಪರಾಧಿಯ ದಿಂಬಿನ ಕೆಳಗಿತ್ತು. ಎಲ್ಲ ಸಾಕ್ಷ್ಯಾಧಾರಗಳನ್ನು ಅವಲೋಕಿಸಿ ಕೆಳಗಿನ ಎರಡು ನ್ಯಾಯಾಲಯಗಳು ಶಿಕ್ಷೆ ವಿಧಿಸಿದ್ದವು. ಆದರೆ ಸರ್ವೋಚ್ಚನ್ಯಾಯಾಲಯವು "ಸಂದೇಹದ" ಲಾಭ ಪಡೆದು ಶಿಕ್ಷೆಯನ್ನು ರದ್ದು ಮಾಡಿತ್ತು. (1982(2) ಸರ್ವೋ.ನ್ಯಾ. ಮೊಕದ್ದಮೆ 35)

ಇಮ್ರತಲಾಲನ ಮೊಕದ್ದಮೆಯಲ್ಲಿ (1987 ಕ್ರಿಮಿನಲ್ ಲಾ ಜನರಲ್ 557, ಮಧ್ಯಪ್ರದೇಶ) ಬಲಾತ್ಕಾರವು ಅಲ್ಪವಯಿಗಳ ಮೇಲೆ ಆದರೆ ಕಠಿಣ ಶಿಕ್ಷೆ ಕೊಡಬೇಕು ಎಂದು ನ್ಯಾಯಾಲಯ ನಿರ್ಣಯಿಸಿತ್ತು. ಅಪರಾಧಿಗೆ ಕೇವಲ 3 ವರ್ಷ ಶಿಕ್ಷೆಯೆಂದರೆ

ಅವನನ್ನು ಮೋಜಿನ ಉಪಹಾರಕ್ಕೆ ಕಳಿಸಿದಂತೆ ಎಂದು ಹೇಳಿ, ಕೆಳಗಿನ ನ್ಯಾಯಾಲಯಗಳ ತೀರ್ಪನ್ನು ಟೀಕಿಸಿದೆ. ಆಗ ಕೂಡ ಸರಕಾರವು 3 ವರ್ಷದ ಶಿಕ್ಷೆಯನ್ನು ಪ್ರಶ್ನೆ ಮಾಡಲೇ ಇಲ್ಲ. ಅದು ಹಾಗೆಯೇ ಉಳಿಯಿತು, ಅವಧಿ ಹೆಚ್ಚಿಸಲಿಲ್ಲ.

ರಾಮಮೂರ್ತಿ ವಿರುದ್ಧ ಹರಿಯಾಣ (AIR 1970 ಸರ್ವೋ. ನ್ಯಾ. 1029) ಮೊಕದ್ದಮೆಯಲ್ಲಿ ಸತ್‌ನಾದುರೌರ (ದೇವಸಮಾಜ, ಸ್ಕೂಲ್, ಅಂಬಾಲಾದ 9ನೇ ವರ್ಗದ ಬಾಲಕಿ) ಅವಳ ಮೊಕದ್ದಮೆಯಲ್ಲಿ, ನಾಲ್ಕು ಜನರು ಒಂದು ವಾರದವರೆಗೆ ಬಲಾತ್ಕರಿಸಿದ್ದರು. ಬಾಲಕಿ ಸಂಭೋಗಕ್ಕೆ ಒಗ್ಗಿದ್ದಳು ಎಂಬ ಹೇಳಿಕೆಯೊಡನೆ ಅಪರಾಧಿಗಳನ್ನು ಬಿಡುಗಡೆ ಮಾಡಿತ್ತು.

ಒಂದು ವೇಳೆ ಬಲಾತ್ಕಾರ ಮಾಡಿದವರು ಸಂಬಂಧಿಸಿದ, ಅಂದರೆ ತಂದೆ, ಮಲತಂದೆ, ಅಕ್ಕ, ಅಣ್ಣ, ತಮ್ಮ ಮುಂತಾದವರಿದ್ದರೆ ಅವರ ವಿರುದ್ಧ ಬಾಲಕಿ ನ್ಯಾಯಾಲಯಕ್ಕೆ ಹೋಗುವದಾದರೂ ಹೇಗೆ? ಪೊಲೀಸರಲ್ಲಿ ದೂರು ಸಲ್ಲಿಸಿ ತನ್ನ ಭವಿಷ್ಯವನ್ನೇ ಪಣಕ್ಕಿಟ್ಟಂತೆ, ಮನೆಯ ಮಂದಿಯನ್ನು ಜೈಲಿಗೆ ಕಳಿಸುವುದು ಸಮಾಜದಲ್ಲಿಯ ದುಷ್ಟ ತೋಳಗಳನ್ನು ಆಹ್ವಾನಿಸಿದಂತೆಯೇ! ಇದನ್ನು ಬಾಲಕಿ ತಿಳಿದಿರುತ್ತಾಳೆ. ಆಧಾರವಿಲ್ಲದ ಗತಿಹೀನ, ವಿವಶ್ಯಳಾದ ಬಾಲಕಿಗೆ, ಎಷ್ಟು ಸರಕಾರಿ ಗೈರಸರಕಾರಿ ಸುರಕ್ಷಿತ ಸ್ಥಳಗಳು ಆಶ್ರಯ ಕೊಡುತ್ತವೆ, ಅವುಗಳು ಕೊಟ್ಟರೂ, ಭ್ರಷ್ಟ ವ್ಯಭಿಚಾರಿ ಕುಡುಕರ ನಿಲಯಗಳಾದ ಅವು ಹೊತ್ತಿ ಉರಿಯುತ್ತಿರುವ ನರಕಗಳಾಗಿವೆ.

'ಸುಟ್ಟ ಮೋರೆಯವಳೇ ನೀನು ಸಾಯಲಿಲ್ಲವೇಕೆ?'

ಲೇ - ಸುದರ್ಶನ ದ್ವಿವೇದಿ (ಧರ್ಮಯುಗ 1st Dec. 1992)

ಚಂದ್ರಸೂರ್ಯರ ಮೇಲೆ ರಾಹುಗ್ರಹಣವಾಗುತ್ತದೆ. ಆದರೆ ಕೆಲವೇ ಘಂಟೆಗಳಲ್ಲಿ ಅವು ಮುಕ್ತವಾಗುತ್ತವೆ. ಬಲಾತ್ಕಾರದ ರಾಹು ಒಮ್ಮೆ ಒಬ್ಬ ಬಾಲಕಿ (ಮಹಿಳೆ)ಯನ್ನು ಗ್ರಹಣ ಮಾಡಿದರೆ ಅವಳು ತನ್ನ ಜೀವನದುದ್ದಕ್ಕೂ ಕತ್ತಲೆಯ ಮುಸುಕಿನಲ್ಲಿ ಕೊಳೆಯುತ್ತ ಅಲ್ಲಿಂದ ಹೊರಬರುವ ಮಾರ್ಗವೇ ದೊರೆಯದು. ದೇಹವಷ್ಟೇ ಅಲ್ಲದೇ ಮನಸ್ಸು ಕೂಡ ತಳಮಳಗೊಂಡು ಸಮಾಜದ ಯಾವ ಮೂಲೆಯಿಂದಲೂ ಸಹಾನುಭೂತಿಯಾಗಲೀ, ಸನ್ಮಾನ ಹೋಗಲಿ, ಪ್ರೀತಿಯ ಒಂದು ನುಡಿಯೂ ದೊರೆಯದು. ನಿಂದನೆಗಳಿಗೆ ಅವಳೊಂದು ಮಾಧ್ಯಮ, ಕೇವಲ ಕೊಂಕುನುಡಿಗಳನ್ನೇ ಕೇಳಬೇಕಾಗುತ್ತದೆ. ಆಶ್ಚರ್ಯ ವೆಂದರೆ ಬಲಾತ್ಕಾರಿಯ ಕಳಂಕ ಅವಳ ಹಣೆಪಟ್ಟಿಯಾಗುತ್ತದೆ. ಅವಳಷ್ಟೇ ಅಲ್ಲದೇ ಅವಳ ಪರಿವಾರವೇ ಈ ಜಘನ್ಯ ಅಪರಾದಲ್ಲಿ ಧೂಳಿಪಟವಾಗುತ್ತದೆ. ಆಗ ಪರಿವಾರವು 'ಸುಟ್ಟ ಮೋರೆಯವಳೇ ನೀನು ಸತ್ತೇಕೆ ಹೋಗಲಿಲ್ಲ' ಎನ್ನುವ ಮಾತು ಸಹಜವಾಗುತ್ತದೆ. ಸಾವು ಶರೀರಕ್ಕೆ ಆದರೆ ಬಲಾತ್ಕಾರವು ಅವಳ ಮಾನ ಸನ್ಮಾನ ಮತ್ತು ವ್ಯಕ್ತಿತ್ವವನ್ನೇ ಆಹುತಿ ಮಾಡುತ್ತದೆ.

ಪ್ರಸಿದ್ಧ ಪತ್ರಕಾರ ಶ್ರೀ 'ಗಣೇಶ ಮಂತ್ರಿ' ಅವರು ಆರ್ಥಿಕ ಅವಲಂಬನೆಯೇ ನಮ್ಮ ಸಮಾಜದಲ್ಲಿ ಸ್ತ್ರೀಯ ಬಗ್ಗೆ ಇರುವ ದೃಷ್ಟಿ ಮತ್ತು ಸಾರ್ವತ್ರಿಕ ವಿಚಾರ ಪುರುಷನಕ್ಕಿಂತ ಹೀನಳೆಂದು ಶತಮಾನಗಳಿಂದ ತೀರ್ಮಾನಿಸಲ್ಪಟ್ಟಿದೆ. ಅವಳನ್ನು ತನ್ನ ಹದ್ದುಬಸ್ತಿನಲ್ಲಿಟ್ಟಿರುವುದೇ ಪುರುಷ ಶಕ್ತಿಯ ದ್ಯೋತಕ ಎಂದು ಪುರುಷ ತಿಳಿದಂತಿದೆ. ಇದೇ ವಿಚಾರ ಅವಳನ್ನು ಬಲಾತ್ಕರಿಸಿದಲ್ಲಿ ಮತ್ತು ಅತ್ಯಾಚಾರ ಮಾಡುವಲ್ಲಿ ವ್ಯಕ್ತವಾಗುತ್ತದೆ. (ಜಲಗಾಂದ 'ಮತಲಬ' 1st Sept. 1994)

ಶುಭಾ ವರ್ಮಾ "ಬಲಾತ್ಕಾರದಿಂದ ವ್ಯಥಿತ ಮಹಿಳೆ, ಮೊದಲು ಅವಳೂ ಒಬ್ಬ ವ್ಯಕ್ತಿ ಎಂದೂ, ಸಮುದಾಯದ ಸಂಪತ್ತು ಅಥವಾ ವೃತ್ತಿಯ ಮರ್ಯಾದೆ" ಎಂದಿದ್ದಾಳೆ. ಈ ಮಾತು ಕಾನೂನಿನ ವ್ಯವಸ್ಥೆಗೂ ತಿಳಿದಿರಬೇಕು. ನಿಜವಾದ (ಅಸ್ಮಿತಾ) 'ಸ್ತ್ರೀತ್ವ' ಅದು ಸನಾತನ ಪ್ರಶ್ನೆಯಾಗಿದ್ದು, ಅಹಂಕಾರವಲ್ಲ. ("ಬಲಾತ್ಕಾರ್ ಕಾ ಸವ್ವಾಲ ಅಸ್ಮತ್‌ನಹಿ ಅಸ್ಮಿತಾರಾ") [ಸಾಪ್ತಾಹಿಕ-ಹಿಂದುಸ್ತಾನ 15-21 ಜುಲೈ 1990]

"ಈ ಸಾಮಾಜಿಕ ಚಕ್ರವ್ಯೂಹದಲ್ಲಿ ಅಪರಾಧಿಗೆ ಅಧಿಕಾರ ದೊರಕುತ್ತದೆ. ಅವರೇ ನ್ಯಾಯ ನಿರ್ಣಾಯಕರು, ಅವರಿಗೇ ಅಪರಾಧವೆಸಗುವ ಹಕ್ಕು ಮೀಸಲಾಗಿದೆ. ತಮ್ಮ ಪತ್ನಿಯರನ್ನೆ ಮಾರುವಂಥ, ಬೇರೆಯವರ ಪತ್ನಿಯರನ್ನು ಉಪಭೋಗಿಸುವಂಥ ಹಕ್ಕನ್ನು ಪಡೆಯುತ್ತಾರೆ." ಇದು ಮಣಿಮಾಲಾ ಅವರ ಹೇಳಿಕೆ. ("ಏಕ್ ಸಫರ್, ಬಿಸಮತಿಯಾ ಸೆ ಬ್ಯಾವರಿಬಾಯಿತಕ್" - 'ಹಂಸ' ಪತ್ರಿಕೆ ನವ್ಹೆಂಬರ್-ಡಿಸೆಂಬರ್ 1994 ಪು. 175-179)

ಕಾಕು Vs ಹಿಮಾಚಲ ಪ್ರದೇಶ (AIR 1976 ಸರ್ವೋ. ನ್ಯಾ. 1971)

ಕಾಕು ವಯ 13. 7 ವರ್ಷದ ಬಾಲಕಿಯ ಬಲಾತ್ಕಾರಕ್ಕಾಗಿ ಸತ್ರ ನ್ಯಾಯಾಧೀಶರು ನಾಲ್ಕು ವರ್ಷ ಜೈಲು ಶಿಕ್ಷೆ ವಿಧಿಸಿದ್ದರು. ಸರ್ವೋಚ್ಚ ನ್ಯಾಯಾಲಯವು "ಅಪರಾಧಿಯನ್ನು ಶಿಕ್ಷೆಯಿಂದ ಸುಧಾರಿಸುವುದು ಮುಖ್ಯ ಉದ್ದೇಶವಾಗಿರುತ್ತದೆ ಮತ್ತು ಅಪರಾಧಿಯ ಮತ್ತೆ ಸಾಮಾಜಿಕ ಜೀವನದಲ್ಲಿ ಪುನರ್ವಾಸ ಮಾಡಿಸುವುದಾಗಿರುತ್ತದೆ. ಶಿಕ್ಷೆಯು ಇದನ್ನು ಸಾಧಿಸದು" ಎಂದು ಹೇಳಿಕೆ ನೀಡಿ ಮಾನ್ಯ ನ್ಯಾಯಾಧೀಶರು ಅಪರಾಧಿಯ ವಯಸ್ಸನ್ನು ನಾವು ಅಲಕ್ಷಿಸುವಂತಿಲ್ಲ ಎಂದು ಹೇಳಿ ಮುಂದುವರೆದು ಅಪರಾಧಿಯ ಕೃತ್ಯ ಪೂರ್ಣ ಕ್ರೂರವಾಗಿ, ಅತ್ಯಂತ

ಪರಪೀಡಕವಾಗಿದ್ದರೆ ಮೊದಲು ಪ್ರತಿಕ್ರಿಯೆ ಕಠಿಣ ಶಿಕ್ಷೆಯೇ ಅದನ್ನು ಹೃದಯಹೀನರಾಗಿ ಮಾಡಬಹುದು. ಮೊಕದ್ದಮೆಯಲ್ಲಿ ಅಪೀಲದಾರನು ಕೇವಲ 13 ವರ್ಷದವನಿದ್ದು, ಎಲ್ಲ ಸಂಗತಿಗಳನ್ನು ಮತ್ತು ಅಲ್ಲಿ ಅಡಕವಾಗಿರುವ ವಿಚಾರಗಳನ್ನು ಗಮನಿಸಿ ತೀರ್ಮಾನಿಸುವುದಾಗಿ ತಿಳಿಸುತ್ತಾರೆ, ಮತ್ತು ನ್ಯಾಯದ ಧ್ಯೇಯೋದ್ದೇಶಗಳು ಪೂರ್ಣಗೊಳ್ಳಬೇಕೆಂದೂ ಅಪರಾಧಿಯ ಅಪೀಲನ್ನು ಆಧರಿಸಿ ಶಿಕ್ಷೆಯನ್ನು 1 ವರ್ಷ ಜೈಲು ಮತ್ತು ರೂ. 3000/- ದಂಡ ವಿಧಿಸುತ್ತಾರೆ. ಈ ಅಪರಾಧಿಯನ್ನು ವಯಸ್ಕ ಅಪರಾಧಿಗಳಿಂದ ಬೇರೆ ಇಡಲು ಕೂಡ ತಿಳಿಸಲಾಗಿತ್ತು. ವಸೂಲಾದ ದಂಡದ ಹಣವನ್ನು ಬಲಾತ್ಕಾರಕ್ಕೆ ಒಳಗಾದ ಬಾಲಕಿಯ ತಾಯಿಗೆ ಕೊಡಬೇಕೆಂದೂ ತಿಳಿಸಲಾಗಿತ್ತು. ಹೀಗೆ ಮಾಡುವುದರಿಂದ ಕಾನೂನಿನ ಧ್ಯೇಯೋದ್ದೇಶಗಳನ್ನು ಪಾಲಿಸಿದಂತಾಗುವುದು.

ಇಷ್ಟು ದಿನಗಳವರೆಗೆ ಕೆಳಸ್ತರದ ಪರಿವಾರಗಳಲ್ಲಿ ನಡೆಯುತ್ತಿದ್ದ ಇಂಥ ಘಟನೆಗಳು ಇತ್ತಿತ್ತಲಾಗಿ ಮಧ್ಯಮ ಮತ್ತು ಉಚ್ಚಕುಟುಂಬಗಳಲ್ಲಿ ಕೂಡ ನಡೆಯುತ್ತಿರುವುದು ಕಂಡುಬರುತ್ತದೆ. ಎಲ್ಲಕ್ಕೂ ಆಶ್ಚರ್ಯದ ಸಂಗತಿಯೆಂದರೆ ಅಲ್ಪವಯಿ ಹುಡುಗರು ಹಸುಳೆಗಳ ಮೇಲೆ ಬಲಾತ್ಕಾರ ಮಾಡುವ ಘಟನೆಗಳು ಹೆಚ್ಚುತ್ತಿವೆ. ಇದಕ್ಕೆ ಕಾರಣವೆಂದರೆ T.V. ಚಲನಚಿತ್ರಗಳಲ್ಲಿ Sex ಮತ್ತು ನಗ್ನತೆ, ಹಿಂಸೆಗಳ ಪರಿಣಾಮ ಕಿಶೋರರ ಮನಸ್ಸಿನ ಮೇಲೆ ಆಳವಾಗಿಯೇ ಆಗುತ್ತದೆ.

ಪೊಲೀಸರ ಭ್ರಷ್ಟಾಚಾರ ನ್ಯಾಯದಾನಗಳಲ್ಲಿಯ ವಿಳಂಬ ಅಲ್ಲದೇ ನ್ಯಾಯಕ್ಕಾಗಿ ಖರ್ಚು, ಸಮಾಜದಲ್ಲಿ ಮರ್ಯಾದೆ ಗೀಡಾಗುವ ಭಯ, ಕಾನೂನುಗಳ ಬಿಡಿಸಲಾಗದ ತೊಡಕು ಅಲ್ಲದೆ, ನ್ಯಾಯದಾನದಲ್ಲಿಯ ಸಾಮಂತ ದೃಷ್ಟಿಕೋನ ಈ ಎಲ್ಲ ಸೇರಿ ದುಃಖಿತರಿಗೆ ಭಯ ಮತ್ತು ಆತಂಕ ಕಟ್ಟಿಟ್ಟಿದ್ದೆ. ಇಲ್ಲಿ ಸುರಕ್ಷತೆ ಕಡಿಮೆ. ಅಲ್ಪವಯಿ ಬಾಲಕಿಯರ ಬಲಾತ್ಕಾರ ರೋಗಗ್ರಸ್ಥ ಸಮಾಜದ ಮುಖವಾಗಿದೆ. ಅದು ನಿರಂತರ ಅಪರಾಧಿಯ ಸ್ಥಾನದಲ್ಲಿ ನಿಲ್ಲುವ ಮುನ್ಸೂಚನೆಯೂ ಆಗಿದೆ. ಈಗಲೇ ಈ ರೋಗಕ್ಕೆ ತಕ್ಕ ಉಪಚಾರ ಮಾಡದಿದ್ದಲ್ಲಿ, ಇದು ಮಹಾಮಾರಿಯಂತೆ ದೇಶಕ್ಕೆ ಗಂಡಾಂತರಕಾರಿಯಾಗುವುದು. ರಾಷ್ಟ್ರೀಯ ಮಟ್ಟದಲ್ಲಿ ಸರಕಾರಿ ಅಥವಾ ನೌಕಾರೇತರ ಸಂಘಟನೆಗಳು, ಗಂಭೀರವಾಗಿ ಚಿಂತಿಸಿ ಯೋಜನಾಬದ್ಧ ಕಾರ್ಯಕ್ರಮ ರೂಪಿಸಿ ಯೋಗ್ಯಕ್ರಮ ಜರುಗಿಸುವುದು ಅವಶ್ಯ. ಈಗಾಗಲೇ ಸಾಕಷ್ಟು ತಡವಾಗಿದೆ, ಇನ್ನೂ ವೇಳೆ ಕಳೆಯುವುದು ಗಂಡಾಂತರಗಳಿಗೆ ಆಹ್ವಾನ.

ವಿಶ್ವಪ್ರಸಿದ್ಧ ಲೇಖಕಿ 'ಸೂಸನ್ ಬ್ರೌನ್ ಮಿಲ್ಲರ್' ಅವರು ತಮ್ಮ ಪುಸ್ತಕ 'Against our willದಲ್ಲಿ (Men Women & Rape)' ಬಾಲಕಿಯರ ಲೈಂಗಿಕ ಶೋಷಣೆಯ ಬಗ್ಗೆ ಪುಟ 271-282ರಲ್ಲಿ ವಿಸ್ತಾರವಾಗಿ, ವಿವರಿಸುತ್ತ, ತಂದೆಯಿಂದ ಮಗಳ ಮೇಲೆ ಬಲಾತ್ಕಾರವು ಪರಂಪರಾಗತವಾಗಿ ಬಂದ 'ಹಿಟ್ಲರ್‌ಶಾಹಿ' ಆಗಿದೆ, ಪತ್ನಿಯ ಜೊತೆಗೆ ಮಕ್ಕಳೂ ಕೂಡ ತನ್ನ ಸಂಪತ್ತೆಂದೇ ತಿಳಿವಳಿಕೆಯಾಗಿದೆ ಎಂದಿದ್ದಾರೆ.

'ಪೋರ್ನೋಗ್ರಾಫಿ' 'Women voilence and women liberties'ದಲ್ಲಿ ಡಾಯನಾ ಇವಚ್ ರಸ್ಸೆಲ್ ಅವರು ಕಿಶೋರರ ಬಲಾತ್ಕಾರದ ಕಾರಣ, ಹೆಚ್ಚಾಗುತ್ತಿರುವ ಅಶ್ಲೀಲ ಸಾಹಿತ್ಯ ಮತ್ತು ಚಲನಚಿತ್ರಗಳೇ ಎಂದಿದ್ದಾರೆ. ಇವೆಲ್ಲ ಹೆಚ್ಚಿದ ಬಲಾತ್ಕಾರಕ್ಕೆ ಪುಷ್ಟಿ ಕೊಡುತ್ತವೆ. ಅಧಿಕಾಂಶ ಬಾಲಕಿಯರ ಬಲಾತ್ಕಾರವು ಅವರನ್ನು ವೇಶ್ಯಾವೃತ್ತಿಗೆ ತಳ್ಳುವುದಾಗಿರುತ್ತದೆ, ಅಶ್ಲೀಲ ಸಾಹಿತ್ಯ, ಚಲನಚಿತ್ರಗಳು ಹೆಚ್ಚಾಗಿ ಪುರುಷರ ಕೈಯಲ್ಲಿವೆ.

ಭಾರತೀಯ ಸಮಾಜಶಾಸ್ತ್ರಜ್ಞನಾದ ಶ್ರೀ ಎಸ್. ಡಿ. ಪುಣೇಕರ ಅವರ ಅಧ್ಯಯನದಲ್ಲಿ "ವೇಶ್ಯಾವೃತ್ತಿಯಲ್ಲಿರುವ ಮಹಿಳೆಯರು ಹೆಚ್ಚಾಗಿ ಬಾಲ್ಯದಲ್ಲಿಯೇ ಬಲಾತ್ಕಾರಕ್ಕೆ ಬಲಿಬಿದ್ದವರಾಗಿರುತ್ತಾರೆ." ಎಂದು ಸ್ಪಷ್ಟಪಡಿಸಿದ್ದಾರೆ. (A study of Prostifition in Bombay) ಪ್ರಸಿದ್ಧ ಕಥೆಗಾರ್ತಿ ಶ್ರೀಮತಿ ಕೃಷ್ಣಾ ಸೋಬತಿ ಅವರ ಉಪನ್ಯಾಸ "ಸೂರಜ ಮುಖಿ ಅಂಧೇರಿ ಕೆ" (1972)ದಲ್ಲಿ ಬಾಲ್ಯದಲ್ಲಿಯೇ ಬಲಾತ್ಕಾರಕ್ಕೆ ಬಲಿಯಾದ ಮಗು (ರತ್ತಿ)ವಿನ ಸಂಘರ್ಷಮಯ ಜೀವನದ ವರ್ಣನೆಯೇ ಇದ್ದು, ಈ ಉಪನ್ಯಾಸವು ಬಾಲ್ಯದ ಬಲಾತ್ಕಾರದ ಪರಿಣಾಮವನ್ನೂ ಮತ್ತು ರತ್ತಿ ತನ್ನ ಸಂಪೂರ್ಣ ಜೀವನವನ್ನೂ ಹೇಗೆ ಕಣ್ಣೀರಿನಲ್ಲಿಯೇ ಸವೆಸಿದಳೆಂಬ ವಿವರವಾಗಿದೆ. ಕಥೆಗಾರ್ತಿ 'ಕೃಷ್ಣಾ' ಅವರ ರತ್ತಿಯು ಕೊನೆತನಕ ಮುಕ್ತರಾಗದಿರುವದನ್ನು ಮನಮಿಡಿಯುವಂತೆ ಚಿತ್ರಿಸಿರುವುದನ್ನು ಇಲ್ಲಿ ಒತ್ತಿ ಹೇಳಲಾಗಿದೆ.

ಕೊನೆಯದಾಗಿ ಬಾಲಿಕೆಯರು ಯಾವುದೇ ರೀತಿಯ ಸಂಬಂಧದಿಂದ ಅಥವಾ ಯಾವುದೇ ರೀತಿಯ ಆಶ್ರಯದಲ್ಲಿ ಸಂಪೂರ್ಣ ಸುರಕ್ಷಿತವಾಗಿ ಕಳೆಯುವುದು ಅಸಾಧ್ಯವೆಂದೇ ಅನಿಸುತ್ತದೆ. ಸದ್ಯದ ಈ ಅಸಪಕ್ಷಿತ, ಆತಂಕಿತ ಮತ್ತು ಭಯಭೀತ ವಾತಾವರಣದಲ್ಲಿ, ಬಾಲಕಿಯರ ಮಾನಸಿಕ, ದೈಹಿಕ ಆರೋಗ್ಯ ವಿಕಸಿತಗೊಳ್ಳಲು, ಚೈತನ್ಯದಿಂದ ಕೂಡಿರಲು ಹೇಗೆ ಸಾಧ್ಯ? ಅಧಿಕಾರ, ಸಮಾಜ, ಮತ್ತು ಸಮಯಗಳು ಪ್ರಶ್ನೆಯ ಪೆಡಂಭೂತವನ್ನೇ ಸೃಷ್ಟಿಸಿವೆ.

ಹೆಣ್ಣು ಮಕ್ಕಳು ಈ ಪೆಡಂಭೂತದಿಂದ ಎಂದು ಮುಕ್ತರಾಗುವರು? ●

# 'ಶರದೋತ್ಸವ'

ತಾ. 28-10-99ರಂದು ಉತ್ತರ ಕರ್ನಾಟಕ ಲೇಖಕಿಯರ ಸಂಘ ಹುಬ್ಬಳ್ಳಿ-ಧಾರವಾಡದವರು ಈ ಶರದೋತ್ಸವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. ತೋಂಟದಾರ್ಯ ಕಲ್ಯಾಣ ಕೇಂದ್ರ, ಗದಗ್‌ನಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ಸುಮಾರು 300-400ರಷ್ಟು ಮಹಿಳೆಯರು ಹಾಗೂ ಪುರುಷರು ಭಾಗವಹಿಸಿದ್ದರು. ಕ.ವಿ.ವಿ. ಪ್ರಸಾರಾಂಗ ಧಾರವಾಡ, ಶ್ರೀಮತಿ ಸುಶೀಲಾ ನಾಯಕ್ (ರೇಡಿಯೋ ಅಕ್ಕಮ್ಮ) ದತ್ತಿ ಉಪನ್ಯಾಸ ಹಾಗೂ ಗದಗಿನ ವಿವಿಧ ಮಹಿಳಾ ಸಂಘಟನೆಗಳ ಸಹಯೋಗದಲ್ಲಿ ಈ ಶರದೋತ್ಸವ ನಡೆಯಿತು. ಬೆಳಿಗ್ಗೆ ಹನ್ನೊಂದು ಘಂಟೆಯಿಂದ 12-30ರವರೆಗೆ ಜರುಗಿದ 'ಶರದೋತ್ಸವ'ದ ಉದ್ಘಾಟನೆಯಲ್ಲಿ ಶ್ರೀಮನ್ ನಿರಂಜನ ಜಗದ್ಗುರು ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಪ್ರಮೀಳಾ ನೇಸರ್ಗಿ, ಖ್ಯಾತ ನ್ಯಾಯವಾದಿಗಳು, ಬೆಂಗಳೂರು, ಡಾ. ಸರೋಜಿನಿ ಶಿಂತ್ರಿ - ಅಧ್ಯಕ್ಷರು, ಉ.ಕ.ಲೇ. ಸಂಘ ಧಾರವಾಡ, ಡಾ. ಕೆ. ಕೇಶವಶರ್ಮ, ಪ್ರಾಧ್ಯಾಪಕರು, ಕುವೆಂಪು ವಿಶ್ವವಿದ್ಯಾನಿಲಯ, ಕಲಬುರ್ಗಿ, ಡಾ. ವ್ಹಿ.ಪಿ. ಪಾಟೀಲ ಜಿಲ್ಲಾ ಪಂಚಾಯತ್ ಅಧ್ಯಕ್ಷರು ಗದಗ್, ಶಕುಂತಲಾ ದಂಡಿನ, ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರು, ನಾಗರತ್ನ ಮುಳುಗುಂದ, ನಗರಸಭೆ ಅಧ್ಯಕ್ಷರು ಹಾಗೂ ಶಶಿಕಲಾ ವೀರಯ್ಯಸ್ವಾಮಿಯವರು ಭಾಗವಹಿಸಿದ್ದರು. ಉದ್ಘಾಟನೆ ಮಾಡಿದ ಪ್ರಮೀಳಾ ನೇಸರ್ಗಿಯವರು ಮಹಿಳೆ ಇಂದು ಯಾರಿಗೂ ಕಡಿಮೆ ಇಲ್ಲದಿದ್ದರೂ ಆಕೆಯ ಮೇಲೆ ನಾನಾ ರೀತಿಯ ಶೋಷಣೆ ನಡೆಯುತ್ತಿದೆ ಎಂದು ಅಭಿಪ್ರಾಯಪಟ್ಟರು. ಆಶು ಭಾಷಣ ಮಾಡಿದ ಡಾ. ಕೆ. ಕೇಶವಶರ್ಮಾರವರು ಹೊಸ ತಾಂತ್ರಿಕತೆಯಿಂದಾಗಿ ಅಂತರ್‌ರಾಷ್ಟ್ರೀಯ ಆರ್ಥಿಕ ಹುನ್ನಾರಗಳಿಗೆ ಮಧ್ಯಮ ವರ್ಗದ ಮಹಿಳೆಯರು ಕೇಂದ್ರವಾಗುತ್ತಿದ್ದಾರೆ. ಸ್ತ್ರೀವಾದ ಮಾರಾಟದ ಸರಕಾಗುತ್ತಿದೆ. ಜಾಹೀರಾತುಗಳು ಕೆಳವರ್ಗದ ಮಹಿಳೆಯರನ್ನು ಕೇಂದ್ರವಾಗಿಟ್ಟುಕೊಳ್ಳುವುದಿಲ್ಲ. ಏಕೆಂದರೆ ಸೌಂದರ್ಯವರ್ಧಕಗಳಿಗೆ ಅವರು ಗ್ರಾಹಕರಲ್ಲ. ಈ ಬಗ್ಗೆ ಯೋಚಿಸಬೇಕು ಎಂದರು. ಕೇಶವಶರ್ಮರ ಈ ವಿಚಾರ 'ಶರದೋತ್ಸವ'ದಲ್ಲಿ ಹಲವಾರು ಬಾರಿ ಚರ್ಚೆಗೆ ಒಳಗಾಯಿತು. ಸ್ತ್ರೀವಾದಿ ಸಾಹಿತ್ಯ 'ರೂಪಕ'ದ ಹಿನ್ನೆಲೆಯಲ್ಲಿ ರಚಿತವಾಗಿರದಿದ್ದರೆ ಅಥವಾ 'ರೂಪಕ'ದ ಮೂಲಕವೇ ಹೇಳಬೇಕೆಂಬ ನಿಲುವನ್ನು ಶರ್ಮರು ಪ್ರಶ್ನಿಸಿದರು. ಡಾ. ಸರೋಜಿನಿ ಶಿಂತ್ರಿಯವರು ಭೆಟ್ಟಿ ಫ್ರೀಡ್ಮರವರ 'ಫೀಮೇಲ್ ಯುನಕ್ ಹಾಗೂ 'ದಿ ಸೆಕೆಂಡ್ ಸ್ಟೇಜ್' ಸಿಮೆನ್ ದಿ ಬುವಾರವರ 'ದಿ ಸೆಕೆಂಡ್ ಸೆಕ್ಸ್' ಹಾಗೂ ಜರ್ಮನ್ ಗ್ರೇರ್‌ರವರ ಪುಸ್ತಕಗಳ ವಿಚಾರಧಾರೆಯನ್ನು ಕುರಿತು ಮಾತನಾಡಿದರು. ಪಶ್ಚಿಮದಲ್ಲಿ ಮಹಿಳೆ ಶೋಷಿತಳಾದ ಹಾಗೆ ಪೂರ್ವ ದೇಶಗಳಲ್ಲಿಯೂ ಆಗಿದ್ದಾಳೆ ಎಂದರು.

ಶ್ರೀಮನ್ ನಿರಂಜನ ಜಗದ್ಗುರು ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಮಹಿಳೆಯರಿಗೆ ಅನ್ಯಾಯ ನಡೆಯುತ್ತಿದೆ. ಇಂತಹ ಸಂಘಟನೆಗಳು ಮಹಿಳೆಯರನ್ನು ಸ್ವಪ್ರಾತ್ಮಕವಾಗಿ ತೊಡಗಿಸಬೇಕು ಎಂದು ಹೇಳಿದರು. ಜೊತೆಗೆ ಪ್ರೇಮಾ ಹಂದಿಗೋಳ್‌ರವರ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನವನ್ನೂ ಸಹ ಇವರು ಉದ್ಘಾಟಿಸಿದರು. ಗದಗ್‌ನವರೇ ಆದ ಶಶಿಕಲಾ ವೀರಯ್ಯಸ್ವಾಮಿಯವರು ಈ ಬಾರಿಯ ರಾಜ್ಯಮಟ್ಟದ ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷರಾಗಿ ಆಯ್ಕೆಯಾದ ಹಿನ್ನೆಲೆಯಲ್ಲಿ 'ಶರದೋತ್ಸವ'ದಲ್ಲಿ ಅವರನ್ನು ಸನ್ಮಾನಿಸಲಾಯಿತು. ಸನ್ಮಾನಿತರಾಗಿ ಮಾತನಾಡಿದ ಶಶಿಕಲಾರವರು ಈಗಿನ ಯುವತಿಯರು ಈ ರೀತಿಯ ಸಂಕಿರಣದಲ್ಲಿ ಸಾಕಷ್ಟು ಭಾಗವಹಿಸಬೇಕು. ಹೊಸ ಅಲೆಯಲ್ಲಿ ಈ ವೈಚಾರಿಕ ವಿಚಾರಗಳು ಬೇರು ಬಿಡಬೇಕು, ವಿದ್ಯಾರ್ಥಿನಿಯರು ಇಂತಹವುಗಳಿಗೆ ತೆರೆದುಕೊಳ್ಳಬೇಕು ಎಂದರು. ಉದ್ಘಾಟನೆಯ ಸಂದರ್ಭದಲ್ಲಿ ಹಾಗೂ ಇತರ ಗೋಷ್ಠಿಗಳಲ್ಲಿ ನಿರ್ವಹಣೆ, ನಿರೂಪಣೆ ಮಾಡುತ್ತಿದ್ದವರಿಂದ ಹಿಡಿದು ಪ್ರಾರ್ಥನೆ ಇತ್ಯಾದಿಗಳನ್ನು ಮಾಡಿದವರೂ ಸಹ ವಚನಗಳನ್ನು ಆಗಾಗ್ಗೆ ಬಳಸುತ್ತಿದ್ದುದು ಗದಗಿನ ಒಂದು ವೈಚಾರಿಕ ಸಾಂಸ್ಕೃತಿಕತೆಯನ್ನು ಎತ್ತಿ ಹಿಡಿಯುತ್ತಿತ್ತು. ಸ್ಥಳ, ಪರಿಸರ ಇತ್ಯಾದಿಗಳ ವಿಶೇಷ ಪ್ರಭಾವ ಗದಗಿನ ಬಹುಮಂದಿಯ ಮೇಲೆ ಪರಿಣಾಮಕಾರಿಯಾಗಿ ಒಡಮೂಡಿದುದನ್ನು ಮಾತನಾಡುವವರೆಲ್ಲಾ ಆಗಾಗ್ಗೆ ನೆನಪಿಸಿಕೊಳ್ಳುತ್ತಿದ್ದ, ವೈಚಾರಿಕ ಚೌಕಟ್ಟಿಗೆ ಬಳಸಿಕೊಳ್ಳುತ್ತಿದ್ದ ವಚನಗಳಿಂದ ಕಾಣಬಹುದಾಗಿತ್ತು. ವಚನಗಳ ಸಂಸ್ಕೃತಿ ಇಡಿಯ ಸಂಕಿರಣದಲ್ಲಿ ತನ್ನದೇ ಆದ ವಿಶೇಷ ಮುದ್ರೆಯನ್ನು ಒತ್ತಿತ್ತು.

'ಸ್ತ್ರೀವಾದ : ಪರಿವರ್ತನೆಯ ಮೈಲಿಗಲ್ಲುಗಳು' ಎಂಬ ವಿಚಾರವಾಗಿ 12.30ರಿಂದ 2 ಘಂಟೆಯವರೆಗೆ ಗೋಷ್ಠಿಯನ್ನು ನಡೆಸಲಾಯಿತು. ' ಸ್ತ್ರೀವಾದಿ ಸಾಹಿತ್ಯ ಪರಿವರ್ತನೆಯ ಹಾದಿಯಲ್ಲಿ' ಕುರಿತಾಗಿ ಡಾ. ವಿನಯಾ ನಾಯಕ್‌ರವರು ಮಾತನಾಡಿದರು. ಜಾನಪದ, ವಚನಸಾಹಿತ್ಯ, ಬೆಳಗೆರೆ ಜಾನಕಮ್ಮ, ಕಲ್ಯಾಣಮ್ಮ, ನಂಜನಗೂಡು ತಿರುಮಲಾಂಬ, ಸಾವಿತ್ರಮ್ಮ, ನವ್ಯದ ಲೇಖಕಿಯರು, ನಂತರದ ಬಂಡಾಯದ ನೆಲೆಯಲ್ಲಿ ಬರೆಯತೊಡಗಿದ ವೀಣಾ ಶಾಂತೇಶ್ವರ್, ಸವಿತಾ ನಾಗಭೂಷಣ್ ಇವರೆಲ್ಲರ ಸಾಹಿತ್ಯದ ನಿಲುವನ್ನು ಕುರಿತು ಮಾತನಾಡಿದರು. ಸ್ತ್ರೀವಾದಿ ಸಾಹಿತ್ಯದ ನೆಲೆಗಳು ಘೋಷಣೆಯಿಂದ, ರೋಷದಿಂದ ಪ್ರಾರಂಭವಾದರೂ ನಂತರದ ಘಟ್ಟಗಳಲ್ಲಿ ಸ್ತ್ರೀ ಶೋಷಣೆಯ ಅಂಶಗಳನ್ನು ಗುರುತಿಸುವ, ಅದರ ಬಗ್ಗೆ ಪ್ರತಿಭಟನಾತ್ಮಕ ಧ್ವನಿಗಳನ್ನು ಹೊರಡಿಸುವ, ನಂತರ ಸ್ತ್ರೀಯರ

ಬದುಕನ್ನೇ ಸ್ವಸ್ವಾತ್ಮಕವಾಗಿ ನೋಡುವಂತಹ ದೃಷ್ಟಿಕೋನಗಳು ಸಾಹಿತ್ಯದಲ್ಲಿ ಬಿಂಬಿತವಾಗುತ್ತಿರುವುದನ್ನು ಡಾ. ವಿನಯಾ ನಾಯಕ್‌ರವರು ಗುರುತಿಸಿದರು. ನಂತರ ಮಾತನಾಡಿದ 'ಮಾನಸ' ಪತ್ರಿಕೆಯ ಚಂಪಾವತಿ ಎಚ್. ಎಸ್. ರವರು ಸ್ವಾಯತ್ತ ಮಹಿಳಾ ಸಂಘಟನೆಗಳ ಬಗ್ಗೆಗಿನ ತಮ್ಮ ನಿಲುವು, ಅನುಭವ ಹಂಚಿಕೊಂಡರು. ತುರ್ತು ಪರಿಸ್ಥಿತಿಯಲ್ಲಿ ಅಸ್ತಿತ್ವಕ್ಕೆ ಬಂದ ಸ್ವಾಯತ್ತ ಮಹಿಳಾ ಸಂಘಟನೆಗಳು ಮಥುರಾ, ರಮೀಜಾಬಿ, ಮಾಯತ್ಯಾಗಿಯವರ ಅತ್ಯಾಚಾರದ ಪ್ರಕರಣಗಳಲ್ಲಿ ದೇಶದಾದ್ಯಂತ ಹಲವಾರು ಕಾರ್ಯಕ್ರಮ ಹಮ್ಮಿಕೊಂಡು ಕಾನೂನು ಬದಲಾವಣೆಗೆ ಪ್ರಭುತ್ವದ ಮೇಲೆ ಹೇರಿದ ಒತ್ತಡವನ್ನು ಪ್ರಸ್ತಾಪಿಸಿದರು. ಕೇಶವಶರ್ಮರ ಹೇಳಿಕೆ-'ಸ್ತ್ರೀವಾದ' ಮಾರಾಟದ ಸರಕಾಗುತ್ತಿದೆ ಎಂಬುದಕ್ಕೆ ಉತ್ತರಿಸುತ್ತ ಸ್ಟೇಟ್ ಹಾಗೂ ಅಂತರ್‌ರಾಷ್ಟ್ರೀಯ ಬಂಡವಾಳಶಾಹಿ ರಾಷ್ಟ್ರಗಳು 'ಸ್ತ್ರೀವಾದಿ' ಭಾಷೆ, ನೆಲೆ ಇತ್ಯಾದಿಗಳನ್ನು 'ಹೈಜಾಕ್' ಮಾಡಿ ಸೂಕ್ಷ್ಮವಾಗಿ ಶೋಷಿಸುತ್ತಿರುವುದರ ಬಗ್ಗೆ ಮಹಿಳಾ ಚಳುವಳಿಗೆ ಎಚ್ಚರವಿದೆ ಹಾಗೂ ಈ ಬಗ್ಗೆ ವಿರೋಧದ ಧ್ವನಿ ಮಹಿಳಾ ಚಳುವಳಿಯಲ್ಲಿ ಬಲವಾಗಿ ಮೂಡಿದೆ ಎಂದರು. ಜೊತೆಗೆ 'ಸ್ಟೇಟ್' ಹಾಗೂ ಅಂತರ್‌ರಾಷ್ಟ್ರೀಯ ಬಂಡವಾಳಶಾಹಿಗಳು ಸ್ತ್ರೀವಾದಿ ಚಳುವಳಿಯನ್ನು 'Co-opt' ಮಾಡುವ ಹುನ್ನಾರ ನಡೆಸಿವೆಯಲ್ಲದೇ ಮಹಿಳೆಯರ ಮೇಲೆ ನಡೆಯುವ ಹಿಂಸೆ ಹೆಚ್ಚಾಗುತ್ತಿರುವುದಕ್ಕೂ ಕಾರಣವಾಗಿವೆ ಎಂದರು. ಒಂದು ಕಡೆಗೆ ಮಹಿಳೆಯರ ಬಗ್ಗೆ ಪ್ರಗತಿಪರ ಯೋಜನೆ ಜಾರಿಗೆ ತರುವಂತೆ ಕಾಣುವ 'ಪ್ರಭುತ್ವ', ಇನ್ನೊಂದು ಕಡೆ 'ಅಭಿವೃದ್ಧಿ ಯೋಜನೆ'ಗಳ ಮೂಲಕ ಮಹಿಳೆಯರಿಗೆ ಮಾರಕವಾಗುತ್ತಿದೆ ಎಂದರು. 'ಸ್ತ್ರೀವಾದಿ ಪತ್ರಿಕೆಗಳ' ಬಗ್ಗೆ ಮಾತನಾಡಿದ ಡಾ. ಶಾಲಿನಿ ರಘುನಾಥ್‌ರವರು ಕಲ್ಯಾಣಮ್ಮ ಹಾಗೂ ತಿರುಮಲಾಂಬರವರು ತರುತ್ತಿದ್ದ ಪತ್ರಿಕೆಗಳ ಇತಿಹಾಸವನ್ನು ಕುರಿತು ಮಾತನಾಡಿದರು. ಸ್ವತಃ ವಿಧವೆಯಾಗಿದ್ದ ಕಲ್ಯಾಣಮ್ಮನವರು ಪತ್ರಿಕೆಗಳ ಮುಖಾಂತರ ಮಹಿಳೆಯರ ಅಭಿವೃದ್ಧಿಗೆ ಶ್ರಮಿಸಿದ್ದನ್ನು ಜ್ಞಾಪಿಸಿಕೊಂಡರು. 'ಮಾನಸ', 'ಅಚಲ' ಪತ್ರಿಕೆಗಳು ಸ್ತ್ರೀವಾದಿ ಹೋರಾಟದ ವಿವಿಧ ಬಗೆಗಳನ್ನು ಗುರುತಿಸಿ ಬರೆಯುವುದನ್ನು ಪ್ರಸ್ತಾಪಿಸಿದರು. ಪತ್ರಿಕೆಗಳು ಹೋರಾಟಕ್ಕೆ ಧ್ವನಿಯಾಗುತ್ತಿವೆ ಎಂಬ ವಿಚಾರದ ಬಗ್ಗೆ, ಹಾಗೂ ಪತ್ರಿಕೆಗಳನ್ನು ಬೆಳೆಸುವಲ್ಲಿ ಎಲ್ಲರಿಗೂ ಇರುವ ಜವಾಬ್ದಾರಿಯ ಬಗ್ಗೆಯೂ ಕೂಡಾ ಡಾ. ಶಾಲಿನಿ ರಘುನಾಥ್‌ರವರು ಮಾತನಾಡಿದರು.

ಉತ್ತರ ಕರ್ನಾಟಕ ಲೇಖಕಿಯರ ಬಳಗ ಈ ಗೋಷ್ಠಿ ಹಮ್ಮಿಕೊಂಡುದುದು ಅರ್ಥಪೂರ್ಣವಾಗಿತ್ತು. ಮಹಿಳಾ ಹೋರಾಟ, ಸ್ತ್ರೀವಾದಿ ಸಾಹಿತ್ಯ, ಸ್ತ್ರೀವಾದಿ ಪತ್ರಿಕೆಗಳು ಇಂದು ಒಂದಕ್ಕೊಂದು ಪೂರಕವಾಗಿ, ಜೊತೆಗೂಡಿ ಹೋರಾಟ ನಡೆಸುವ ಅಗತ್ಯವಿದೆ. ಒಬ್ಬರಿಗೊಬ್ಬರು ತಪ್ಪು-ಒಪ್ಪುಗಳನ್ನು ಹೇಳುತ್ತಾ, ವಿಮರ್ಶಿಸುತ್ತಾ, ಟೀಕೆಗಳನ್ನು, ಮೆಚ್ಚುಗೆಗಳನ್ನು ಸ್ವಾಗತಿಸುತ್ತಾ ಸ್ತ್ರೀವಾದಿ ದೃಷ್ಟಿಕೋನವನ್ನು ಬೆಳೆಸುವ ಜವಾಬ್ದಾರಿ ಎಲ್ಲಾ ಕ್ಷೇತ್ರದ ಮಹಿಳೆಯರ ಮೇಲೆ ಕೂಡಾ ಇದೆ. ಈ ದೃಷ್ಟಿಯಿಂದ ಸ್ತ್ರೀವಾದಿ ಹೋರಾಟ ಸಾಹಿತ್ಯ, ಪತ್ರಿಕೆಗಳ ಅಂತರ್ಗತ ಸಂಬಂಧ ಹೆಚ್ಚು ಹೆಚ್ಚು ತೀವ್ರವಾಗಿ ಬೆಳೆಯಬೇಕಾಗಿದೆ. ಈ ನಿಟ್ಟಿನತ್ತ ಉತ್ತರ ಕರ್ನಾಟಕ ಲೇಖಕಿಯರ ಸಂಘ ಹಮ್ಮಿಕೊಂಡ ಈ ಗೋಷ್ಠಿ ಅರ್ಥಪೂರ್ಣವಾಗಿತ್ತು.

ಮಧ್ಯಾಹ್ನ ನಡೆದ ಕವಿಗೋಷ್ಠಿಯಲ್ಲಿ ಹಲವಾರು ಕವಿಯತ್ರಿಯರು ಭಾಗವಹಿಸಿದ್ದರು. ಪ್ರೊ. ಮಾಲತಿ ಪಟ್ಟಣಶೆಟ್ಟಿಯವರು ಶ್ರೀಮತಿ ಪ್ರೇಮಾ ಹಂದಿಗೋಳ್‌ರವರ ಕವನ ಸಂಕಲನವನ್ನು ಬಿಡುಗಡೆ ಮಾಡಿದರು. ಏಕವ್ಯಕ್ತಿ ಚಿತ್ರ ಕಲಾ ಪ್ರದರ್ಶನದ ಜೊತೆಗೆ ಕವಿಯಾಗಿ ಹಾಗೂ ಇತರ ಪ್ರತಿಭೆ ಒಳಗೊಂಡ ಪ್ರೇಮಹಂದಿಗೋಳ್‌ರವರ ವ್ಯಕ್ತಿತ್ವದ ಮಜಲುಗಳು ಸ್ತುತ್ಯಾರ್ಹವಾಗಿತ್ತು. ಹಲವಾರು ಕವಿಯತ್ರಿಯರು ಇದರಲ್ಲಿ ಭಾಗವಹಿಸಿ ಓದಿದ ಕವನಗಳು ಹೆಣ್ಣಿನ ವಿವಿಧ ಮುಖಗಳನ್ನು ಬಿಂಬಿಸುವಂತಿದ್ದವು. ಅಧ್ಯಕ್ಷತೆ ವಹಿಸಿ ಮಾತನಾಡಿದ ಪ್ರೊ. ಸುಕನ್ಯಾ ಮಾರುತಿ ಇಂದು ಪ್ರಾರಂಭದ ಹಂತದ ದೋಷಗಳ ತೊರೆದು ಸಹ-ಸಮನ್ವಯತೆಯಿಂದ ಬರೆಯುವ ಅಗತ್ಯವನ್ನು ಒತ್ತಿ ನುಡಿದರು. ಪರಿಸ್ಥಿತಿ ಬದಲಾಯಿಸುತ್ತಿರುವ ಸಂದರ್ಭದಲ್ಲಿ ನಾವೂ ಕೂಡಾ ಮುಂದೆ ನಡೆದು ಮಾನವೀಯ ಹಿನ್ನೆಲೆಯಲ್ಲಿ ಎಲ್ಲದನ್ನೂ ಒಳಗೊಂಡು ಬರೆಯುವ ಅಗತ್ಯವಿದೆ ಎಂದು ಇವರು ನುಡಿದರು.

ಸಂಜೆ 4ರಿಂದ 5ರವರೆಗೆ ಸ್ತ್ರೀವಾದ, ಸಾಹಿತ್ಯ, ಪತ್ರಿಕೆಗಳು, ಸಂಘಟನೆಗಳು ಹಾಗೂ ಚಳುವಳಿಗೆ ಸಂಬಂಧಿಸಿದಂತೆ ಸಂವಾದವನ್ನು ಏರ್ಪಡಿಸಲಾಗಿತ್ತು. ಸ್ತ್ರೀವಾದ ಪುರುಷ ದ್ವೇಷಿಯಲ್ಲ, ಮಾನವತಾ ವಾದಕ್ಕೆ ಇದು ಇಂಬು ಕೊಡುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಸಂಘಟನೆಗಳು ಅಗತ್ಯ, ಮಧ್ಯಮ ವರ್ಗದಿಂದ ಸ್ತ್ರೀವಾದ ಕೂಲಿ ಕಾರ್ಮಿಕ ಹೆಂಗಸರತ್ತ ಗಮನ ಕೊಡಬೇಕು, ಮಹಿಳೆಯರ ಆರೋಗ್ಯ, ಕುಟುಂಬ ಯೋಜನೆಯ ವಿಧಾನಗಳ ಪರಿಣಾಮ, ಈ ಕೆಲವು ವಿಚಾರಗಳ ಮೇಲೆ ಸಂವಾದ ಬೆಳಕು ಚೆಲ್ಲಿತು. ಈ ಸಂವಾದದಲ್ಲಿ ಡಾ. ಶಾಂತಾ ಇಮ್ರಾಪುರ್, ಡಾ. ಹೇಮಾ ಪಟ್ಟಣಶೆಟ್ಟಿ, ಎಚ್. ವ್ಹಿ. ನಾಗೇಶ್, ಡಾ. ಶ್ಯಾಮಸುಂದರ ಬಿದರಕುಂದಿ, ಪ್ರಹ್ಲಾದ್ ಅಗಸನಕಟ್ಟೆ, ಚಂದ್ರಶೇಖರ್, ಸಿದ್ದು ಯಾವಲಪರವಿ, ಶಕುಂತಲಾ ಮುಳಗುಂದ ಇನ್ನಿತರರು ಭಾಗವಹಿಸಿದ್ದರು.

ನಂತರ ಗದಗ ಜಿಲ್ಲೆಯ ವಿವಿಧ ರಂಗಗಳಲ್ಲಿ ಸೇವೆ ಸಲ್ಲಿಸಿದ ಮಹಿಳೆಯರಿಗೆ ಸನ್ಮಾನ ಮಾಡಲಾಯಿತು.

'ಶರದೋತ್ಸವ'ದಂತಹ ಗೋಷ್ಠಿಗಳು, ಸಂವಾದ, ಮುಂತಾದವುಗಳು ಸ್ತ್ರೀವಾದದ ಮಜಲುಗಳನ್ನು ಅರ್ಥೈಸುವಲ್ಲಿ, ಅದಕ್ಕೆ ಒಂದು ತಾತ್ವಿಕ ದೃಷ್ಟಿಕೋನ ಕಟ್ಟಿಕೊಡುವತ್ತ ಹೆಜ್ಜೆ ಹಾಕುವಲ್ಲಿ ಸಹಕಾರಿಯಾಗುತ್ತದೆ.

●

# ಪಂಚಾಯ್ತಿ ಉಪಾಧ್ಯಕ್ಷನಿಂದ ಲೈಂಗಿಕ ದೌರ್ಜನ್ಯ

ನಾಗಪಟ್ಟಿಯಂ ಜಿಲ್ಲೆಯ ಅಗಸ್ತಿಯಂಪಲ್ಲಿ ಎಂಬ ಹಳ್ಳಿಯಲ್ಲಿ ಸುಮಾರು 800 ಕುಟುಂಬಗಳಿವೆ. ಭೂಮಾಲೀಕರಾದ ಥೇವರ್ಸ್ ಮತ್ತು ಸಾಂಡಲ್ಸ್ ಎಂಬ ಪ್ರಬಲ ಜಾತಿಯ ಜನರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಅಲ್ಲಿನ ಪೂವಂತೊಪ್ಪು ಎಂಬ ಸಣ್ಣ ಕೇರಿಯಲ್ಲಿರುವ 12 ಬಡ ದಲಿತ ಕುಟುಂಬಗಳು ಭೂಮಾಲೀಕರ ಹಿಂಸೆಗೆ ಬಲಿಯಾಗುತ್ತಲೇ ಬಂದಿದ್ದಾರೆ. ಇತ್ತೀಚೆಗೆ ಸುಬ್ಬಯ್ಯ ಎಂಬ ಬಡ್ಡಿ ವ್ಯಾಪಾರಿ ದಲಿತರಿಗೆ ದುಸ್ವಪ್ನವಾಗಿದ್ದಾನೆ. ಲಾರಿ ಚಾಲಕನಾಗಿದ್ದ ಇವನು ಡಿ.ಎಂ.ಕೆ. ಪಂಚಾಯ್ತಿಯ ಉಪಾಧ್ಯಕ್ಷನೂ ಆಗಿರುವ ಸುಬ್ಬಯ್ಯ ಅಲ್ಲಿನ ದಲಿತರನ್ನು ಜೀತದಾಳುಗಳಿಗಿಂತಲೂ ಕೀಳಾಗಿ ನಡೆಸುಕೊಳ್ಳುತ್ತಿದ್ದ.

ಖಾಲಿ ಹಾಳೆಯ ಮೇಲೆ ಸಹಿ ಪಡೆದುಕೊಂಡು ಸಣ್ಣಪುಟ್ಟ ಮೊತ್ತವನ್ನು ಸಾಲವಾಗಿ ನೀಡುವುದು ಸುಬ್ಬಯ್ಯನ ಹವ್ಯಾಸ. ನಂತರ ಖಾಲಿ ಹಾಳೆಯಲ್ಲಿ ತನಗೆ ಬೇಕಾದ್ದನ್ನು ಬರೆದುಕೊಂಡು ಸಾಲಗಾರರ ಸಣ್ಣಪುಟ್ಟ ಆಸ್ತಿಯನ್ನು ತನ್ನೆಸರಿಗೆ ಮಾಡಿ ಕೊಳ್ಳುತ್ತಿದ್ದ. ಹೀಗೆ ವೇದರಣ್ಯಂನ ಸುತ್ತಮುತ್ತಲಿನ ಉಪ್ಪು ತಯಾರಿಸುವ ಜಾಗಗಳನ್ನು ತನ್ನದಾಗಿಸಿಕೊಂಡಿದ್ದ.

ಪೂವಂತೊಪ್ಪುವಿನಲ್ಲಿ ವಾಸವಾಗಿದ್ದ 50 ವರ್ಷದ ಪಕ್ರಿ 25 ವರ್ಷದ ಶಾಂತಿಯನ್ನು ಮದುವೆಯಾಗಿದ್ದ. ಅವನಿಗೆ ಸುಮತಿ ಎಂಬ 12 ವರ್ಷದ ಮತ್ತು ಕರ್ಪಗಂ ಎಂಬ 9 ವರ್ಷದ ಹೆಣ್ಣುಮಕ್ಕಳಿದ್ದು, ಒಂದು ಎಕರೆ ಉಪ್ಪು ತಯಾರಿಸುವ ಜಾಗವಿತ್ತು. ಸುಬ್ಬಯ್ಯನು ಕಿರುಕುಳ ನೀಡಿದರೂ ಅವರ ಜಾಗವನ್ನು ಮಾರದೆ ಇಟ್ಟುಕೊಂಡಿದ್ದ.

ಶಾಂತಿಯ ಮೇಲೆ ಕಣ್ಣಿರಿಸಿದ್ದ ಸುಬ್ಬಯ್ಯ ರೂ. 300ರನ್ನು ಪೊಟ್ಟುಕೀಳವಿ ಎಂಬ ಮುದುಕಿಯ ಮೂಲಕ ಶಾಂತಿಗೆ ಕಳುಹಿಸಿ, ಅವನೊಂದಿಗೆ ಮಲಗಲು ಕೇಳಬೇಕೆಂದು ಹೇಳಿದ್ದ. ಕೋಪಗೊಂಡ ಶಾಂತಿ, ಹಣವನ್ನು ಮುದುಕಿಯ ಮುಖದ ಮೇಲೆಸೆದು ಕಳುಹಿಸಿದಳು. ಇದರಿಂದ ಅವಮಾನಿತನಾದ ಸುಬ್ಬಯ್ಯ ಶಾಂತಿಯ ಮೇಲೆ ಸೇಡು ತೀರಿಸಿಕೊಳ್ಳಲು ಹೊಂಚು ಹಾಕುತ್ತಿದ್ದ.

ಈ ಘಟನೆ ನಡೆದ ಸ್ವಲ್ಪ ಸಮಯದಲ್ಲೇ ಸುಬ್ಬಯ್ಯ ಶಾಂತಿಯ ಮೇಲೆ ಕಳುವಿನ ಆರೋಪ ಹೊರಿಸಿ, ಅವಳು ಪ್ರತಿಭಟಿಸಿದರೂ, 15 ದಿನದ ಜೈಲು ಶಿಕ್ಷೆಯಾಗುವಂತೆ ಮಾಡಿದ (ಕ್ರೈಂ ನಂ. 411/99 ಐಪಿಸಿ 7 ಸೆಕ್ಷನ್ 380) 8ನೇ ದಿನ ಶಾಂತಿಯನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಲಾಯ್ತು. ತನಗಾದ ಸೋಲೆಂದು ಭಾವಿಸಿ ಸುಬ್ಬಯ್ಯ, ಶಾಂತಿಯನ್ನು ಮುಗಿಸಿಬಿಡಲು ಸಂಚು ಮಾಡಿದ.

ದಿನಾಂಕ 27-9-90ರಂದು ರಾತ್ರಿ ಸುಬ್ಬಯ್ಯ ಚಾಕು, ದೊಣ್ಣೆಗಳಿದ್ದ 15 ಜನ ರೌಡಿಗಳೊಂದಿಗೆ ಶಾಂತಿಯ ಮನೆಯನ್ನು ಸುತ್ತುವರೆದ. ಶಾಂತಿ ಮತ್ತು ಅವಳ ಗಂಡನನ್ನು ಮನೆಯಿಂದ ಹೊರಗೆಳೆದು ಭೀತಿಗೊಂಡ ಇಬ್ಬರು ಮಕ್ಕಳೆದುರು ಥಳಿಸಿದ. ಗೋಳಾಡಿ ಬೇಡಿಕೊಂಡರೂ ಬಿಡದೆ ಶಾಂತಿಯನ್ನು ನೆಲಕ್ಕೆ ಕೆಡವಿ ಹಿಡಿದು ಆಕೆಯ ಒಂದು ಕೈಯನ್ನು ಕತ್ತರಿಸಲಾಯ್ತು. ನಂತರ ರೌಡಿಗಳೆಲ್ಲರೂ ತಮ್ಮ ಚಾಕು ದೊಣ್ಣೆಗಳ ಜೊತೆಗೆ ಶಾಂತಿಯ ಕೈಯನ್ನು ಹೊತ್ತುಕೊಂಡು ಜಾಗ ಖಾಲಿ ಮಾಡಿದರು. ಈ ಘಟನೆ ನಡೆಯುವಾಗ ಪೂವಂತೊಪ್ಪುವಿನ ಯಾವ ನರಹುಳುವೂ ಸಹಾಯಕ್ಕೆ ಬರಲಿಲ್ಲ.

ಶಾಂತಿಯನ್ನು ಹೆಗಲ ಮೇಲೆ ಹೊತ್ತುಕೊಂಡು ಪತ್ರಿ ಸ್ವಲ್ಪ ದೂರದವರೆಗೆ ನಡೆದುಕೊಂಡೇ ಹೋಗಿ ನಂತರ ರಿಕ್ಷಾದಲ್ಲಿ ವೇದರಣ್ಯಂ ಆಸ್ಪತ್ರೆಗೆ ಕರೆದುಕೊಂಡು ಹೋದ. ಅಲ್ಲಿನ ವೈದ್ಯರು ಚಿಕಿತ್ಸೆ ಸಾಧ್ಯವಾಗದಿದ್ದರಿಂದ ಕಾರಿನಲ್ಲಿ ನಾಗಪಟ್ಟಿನಂನಲ್ಲಿರುವ ಆಸ್ಪತ್ರೆಗೆ ಕಳಿಸಿದರು. ಪೊಲೀಸರಿಗೆ ಶಾಂತಿ ದೂರು ನೀಡಿದಾಗ ಪೊಲೀಸರು ಆಕೆಯ ದೂರನ್ನು ಕೇಳಿಸಿಕೊಂಡು ಖಾಲಿ ಹಾಳೆಯ ಮೇಲೆ ಸಹಿ ಮಾಡಿಸಿಕೊಂಡರು. ಐ.ಪಿ.ಸಿ. ಕ್ರೈಂ ಸಂ. : 488/99, ಸೆಕ್ಷನ್ 147, 148, 452, 326 ಮತ್ತು 307ರ ಅಡಿಯಲ್ಲಿ ಕೇಸು ದಾಖಲು ಮಾಡಿಕೊಳ್ಳಲಾಯ್ತು. ಈ ಎಲ್ಲ ಸೆಕ್ಷನ್‌ಗಳು ಸರಳವಾಗಿದ್ದು ಸುಲಭವಾಗಿ ಜಾಮೀನು ಪಡೆಯಬಲ್ಲ ಸೆಕ್ಷನ್‌ಗಳಾಗಿವೆ. ಸುಬ್ಬಯ್ಯ ಹಾಗು ಅವನ 4 ಜನ ಸಹಚರರನ್ನು ಅರೆಸ್ಟ್ ಮಾಡಲಾಗಿದೆ. ಪಕ್ರಿ ಮತ್ತು ಶಾಂತಿ ನಾಗಪಟ್ಟಿನಂ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ.

ಘಟನೆ ನೈಜ ಮಾಹಿತಿ ಪಡೆಯಲು ರವಿಚಂದ್ರನ್ ಮತ್ತು ಸುಂದರ ಅವರನ್ನು ಒಳಗೊಂಡಂತೆ 15 ಜನರನ್ನೊಳಗೊಂಡ ಗುಂಪೊಂದು, ಸ್ಥಳಕ್ಕೆ ಹೋಗಿ ಪುವಂತೊಪ್ಪು ಮತ್ತು ಅಗಸ್ತಿನಪಲ್ಲಿ ಜನರನ್ನು ಮಾತನಾಡಿಸಿ, ಪಕ್ರಿ ಮತ್ತು ಶಾಂತಿಯನ್ನು ಮತ್ತು ವೇದರಣ್ಯಂನ ಡಿ.ಎಸ್.ಪಿ., ವರದರಾಜ, ಪೊಲೀಸ್ ಇನ್‌ಸ್ಪೆಕ್ಟರ್

ಆರ್. ಪ್ರಸನ್ನಕುಮಾರ್ ಹಾಗು ಇನ್ನಿತರರನ್ನು ಭೇಟಿಯಾಗಿ ವರದಿಯೊಂದನ್ನು ತಯಾರಿಸಿದೆ. ಮತ್ತು ಈ ಕೆಳಗಿನ ಬೇಡಿಕೆಗಳನ್ನು ಮುಂದಿಟ್ಟಿದೆ.

1. ಈ ದೌರ್ಜನ್ಯವನ್ನು SC/ST ಕಾಯ್ದೆ 1989ರ ಅಡಿಯಲ್ಲಿ ದಾಖಲಿಸಬೇಕು. ಈ ಕಾಯ್ದೆ ಅನುಸಾರ ಸುಬ್ಬಯ್ಯ ಮತ್ತವನ ಸಹಚರರನ್ನು ಬಂಧಿಸಿ, ತಕ್ಷಣವೇ ಮೊದಲ ಕಂತಿನ ಪರಿಹಾರ ಧನವನ್ನು ಶಾಂತಿಗೆ ನೀಡಬೇಕು.

2. ಸರ್ಕಾರವು, ಸುಬ್ಬಯ್ಯನು ದಲಿತರನ್ನು ಶೋಷಿಸಿ, ಕಬಳಿಸಿರುವ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಬೇಕು. ಜೀವವಿಮುಕ್ತಿ ಕಾಯ್ದೆಯಡಿ ಕೇಸ್ ದಾಖಲಿಸಿ ಆಸ್ತಿಯನ್ನು ನ್ಯಾಯಬದ್ಧವಾಗಿ ಸಲ್ಲಬೇಕಾದವರಿಗೆ ಹಿಂತಿರುಗಿಸಬೇಕು.

3. ಕೇಸಿಗೆ ಸಂಬಂಧಪಟ್ಟಂತೆ, ಕೂಡಲೆ ಕ್ರಮ ತೆಗೆದುಕೊಳ್ಳದ ಡಿ.ಸಿ.ಪಿ. ಇನ್‌ಸ್ಪೆಕ್ಟರ್ ಅವರು ಖಂಡನಾರ್ಹರು ಮತ್ತು ಅವರನ್ನು ಕೂಡಲೆ ವರ್ಗಾವಣೆ ಮಾಡಬೇಕು.

4. ಶಾಂತಿಯ ಮಕ್ಕಳಿಗೆ ರಕ್ಷಣೆ ನೀಡಬೇಕು ಮತ್ತು ಅವಳ ಶಿಕ್ಷಣಕ್ಕೆ ಸಹಾಯ ಮಾಡಬೇಕು.

5. ಶಾಂತಿ ಮೇಲಿನ ಸುಳ್ಳು, ಕಳ್ಳತನ ಆರೋಪವನ್ನು ಹಿಂತೆಗೆದುಕೊಳ್ಳಬೇಕು.

6. ಸುಬ್ಬಯ್ಯ ಮತ್ತವನ ಸಹಚರರ ಜಾಮೀನು ಅರ್ಜಿಯನ್ನು ಪರಿಗಣಿಸಬಾರದು.

ಮುಂದಿನ ಕ್ರಮವಾಗಿ ನಾಗಪಟ್ಟಿಂನ ಡಿ.ಐ.ಜಿ. ಮತ್ತು ಎಸ್. ಪಿ.ಯನ್ನು ಭೇಟಿಯಾಗಿ ಕೇಸಿನ ವಿವರವನ್ನು ನೀಡಲಾಗಿದೆ. ಸುಬ್ಬಯ್ಯ ಮತ್ತವನ 5 ಜನ ಸಹಚರರನ್ನು 19-10-99ರಂದು ಎಸ್.ಸಿ./ಎಸ್.ಟಿ. ಕಾಯ್ದೆಯಡಿ ಬಂಧಿಸಲಾಗಿದೆ.

ಈ ಕೇಸಿಗೆ ಸಂಬಂಧಿಸಿದಂತೆ ಕೆಲಸ ಮಾಡುತ್ತಿರುವ Human Rights Forum for Dalit Liberation ಅವರು, ದಲಿತ ಮತ್ತು ಮಾನವ ಹಕ್ಕುಗಳ ಸಂಘ ಸಂಸ್ಥೆಗಳು ಕೆಳಗಿನ ಅಧಿಕಾರಿಗಳಿಗೆ ತಂತಿ ಕಳುಹಿಸಬೇಕೆಂದು ಮನವಿ ಮಾಡಿಕೊಂಡಿದ್ದಾರೆ.

1. The District Collector, Nagapattinam
2. Chief Minister, St. George Fort, Chennai - 600 009, Tamilnadu
3. The State Human Rights Commission, Govt. Guest House, Cheppakalam, Chennai - 600 005.
4. The SC/ST Commission, Shastri Bhawan, Hatose Road, Chennai - 600 036
5. The National Human Rights Commission, Sardar Patel Bhavan, Sansad Marg, New Delhi - 110 001
6. The National Commission for Women, 4, Deendayal Upadhyaya Marg, New Delhi.

ತಂತಿಯ ವಿಷಯ :

*"We strongly condemn the atrocity perpetrated on shanthi, the Dalit woman at Vedaranyam her hand being cut off. Pray stringent and appropriate action under the SC/ST Act 1989 on Subbaiah and his accomplices and request adequate compensation to Shanthi".*

HRFDL
C/o. The Sign (A Resource Centre)
# 56/52, Vivekananda Nagar,
Mansakkamam Road
Tindivanam, Villupuram West - 604 002,
Ph.: 04147-25499

ಮಾನಸ ತಿಂಗಳ ಪತ್ರಿಕೆಯನ್ನು ಓದುಗರ ಸಹಾಯದಿಂದ ಪ್ರಕಟಿಸುತ್ತಿದ್ದೇವೆ. ಯಾವುದೇ ಸಂಸ್ಥೆಯ ಅಥವಾ ಸರ್ಕಾರದ ನೆರವಿಲ್ಲದೆ ಸ್ವಾಯತ್ತವಾಗಿ ಮಹಿಳೆಯರೇ ಪ್ರಕಟಿಸುತ್ತಿದ್ದೇವೆ. ಸಹೃದಯ ಓದುಗರು ವರ್ಷಕ್ಕೆ **100-00** ರೂ.ಗಳನ್ನು ಕೊಡುಗೆಯಾಗಿ ನೀಡುವುದರ ಮೂಲಕ ಪತ್ರಿಕೆಯ ಪ್ರಕಟಣೆಗೆ ಹಾಗೂ ಮಾನಸದ ಚಟುವಟಿಕೆಗಳಿಗೆ ನೆರವಾಗಬೇಕೆಂದು ಕೋರುತ್ತೇವೆ.

*- ಸಂಪಾದಕೀಯ ಮಂಡಳಿ*

# ಶೋಷಣೆಯ ಸಿಕ್ಕಿನಲ್ಲಿ ಕಮಲಾ

"ನನ್ನ ಮಾನ ಕಾಪಾಡಬೇಕಾದ ಗಂಡನೇ ನನ್ನನ್ನು ಇನ್ನೊಬ್ಬರ ಹಾಸಿಗೆಗೆ ತಳ್ಳಿದಾಗ ನಾನು ಸಿಡಿದು ನಿಲ್ಲದೇ, ಇನ್ನೇನು ಮಾಡಲಿ?" ಹತ್ತು ವರ್ಷಗಳ ಹಿಂದೆ ಮದುವೆಯಾಗಿ, ಐದು ವರ್ಷದ ಹುಡುಗನ ತಾಯಿ ಕಮಲಾ ಕೇಳುವ ಪ್ರಶ್ನೆ ಇದು.

ಜಾತಿ ತಾರತಮ್ಯ ಹಾಗೂ ಹೆಣ್ಣಿನ ದನಿಯನ್ನು ಹತ್ತಿಕ್ಕುವ ಕುಖ್ಯಾತ ಪ್ರದೇಶವೆನಿಸಿಕೊಂಡ ಉತ್ತರಪ್ರದೇಶದ ಮೇರಠ್ ನಗರದ ಬಳಿಯ ಬಟಚೆವರಾ ಗ್ರಾಮದ ಕೂಲಿಕಾರ ದಲಿತ ಮಹಿಳೆ ಕಮಲಾ. ಬಾಬುರಾಮ ಆಕೆಯ ಗಂಡ. ಕಮಲಾ ಎದುರಿಸಬೇಕಾಗಿ ಬಂದ ಸಂದರ್ಭ ನಮ್ಮ ಸಮಾಜದಲ್ಲಿ ಹೆಣ್ಣಿನ ಹಕ್ಕನ್ನು ಹೊಸಕಿ ಹಾಕುತ್ತಾ ಬಂದಿರುವ ಪುರುಷ ಪ್ರಾಧಾನ್ಯಕ್ಕೆ ನಗ್ನ ಸಾಕ್ಷಿಯಾಗಿದೆ.

ತನ್ನನ್ನು ಮದುವೆಯಾದಾಗಿನಿಂದ, ಕೂಲಿ ಕೆಲಸ ಬಿಟ್ಟು, ಉಂಡು ತಿರುಗುವ ಗೂಳಿಯಂತಾ ಗಂಡನ ಬಗ್ಗೆ ಕಮಲಾ ಮೊದಲು ಕೋಪ ತೋರುತ್ತಾ ಬಂದೆಳಾದರೂ, ನಂತರ ಗಂಡ 30,000 ರೂ. ಸಾಲ ಮಾಡಿದ್ದಾನೆಂಬ ವಿಚಾರ ಗೊತ್ತಾದಾಗ ಕೆಂಡಾಮಂಡಲವಾದಳು. ಯಾವುದೇ ಸರಿಯಾದ ಉತ್ತರ ಬಾರದಿದ್ದಾಗ, ಗಂಡನ ಮನವೊಲಿಸಿ ಆ ಸಾಲದ ಪೈಕಿ 10,000 ರೂ.ಗಳನ್ನು ಗಂಡನ ಜೊತೆಗೂಡಿ ತೀರಿಸಿದಳು. ಆದರೆ ಒಂದು ದಿನ ಗಂಡ, ಸಾಲಕೊಟ್ಟ ಬ್ರಿಜಲಾಲನನ್ನು ಮನೆಗೆ ಕರೆತಂದು, "ನೀನು ಅವನ ಬಳಿ ಈವತ್ತು ರಾತ್ರಿ ಮಲಗು; ಅವ ಸಾಲ ಸ್ವಲ್ಪ ಕಮ್ಮಿ ಮಾಡಬಹುದು" ಎಂದಾಗ, ಅಬ್ಬರಿಸಿ, ಕೂಗಾಡಿದಳು. ಸದ್ಯ; ಆ ಮನುಷ್ಯ ಬ್ರಿಜಲಾಲ ನಿಜಕ್ಕೂ ಮನುಷ್ಯನಾಗಿದ್ದ; ಈ ಮಾತು ಗೊತ್ತಾದಾಗ ಅವನೂ ಕೂಡ ಹಿಂಜರಿದ; ತಾನು ಮದುವೆಯಾದವ, ನಾಲ್ಕು ಮಕ್ಕಳಿರುವವ ಎಂದು ಹೇಳಿ, ದೂರ ಹೋದ.

ಆದರೆ ಈ ಪ್ರಸಂಗ ಗಂಡ ಬಾಬುರಾಮನನ್ನು ಕೆರಳಿಸಿತು. ತನ್ನ ಉಪಾಯ ಫಲಿಸದೇ ಹೋದದ್ದಲ್ಲದೆ, ತನಗೇ ಉಪದೇಶ ಕೇಳಬೇಕಾಗಿ ಬಂದ ಪರಿಸ್ಥಿತಿ ಆವನನ್ನು ಮೃಗವನ್ನಾಗಿಸಿತು. ಅವನು ಮಿತ್ರ ಬ್ರಿಜಲಾಲನ ಎದುರೇ, ಹೆಂಡತಿಯ ಸೀರೆ ಎಳೆದು ಹಾಕಿದ; ಹಲ್ಲೆ ಮಾಡಿದ. ಈ ಪ್ರಸಂಗ ನಡೆದ ಬಳಿಕ, ಬ್ರಿಜಲಾಲ ಎಷ್ಟೋ ದಿನ ಈ ಕಡೆ ಮುಖ ಹಾಕಲೇ ಇಲ್ಲ. ಆದರೆ ಇತ್ತ ಕಮಲಾ ಮಾತ್ರ ಗಂಡನ ನಾನಾ ಕಿರುಕುಳಕ್ಕೆ, ದೌರ್ಜನ್ಯಕ್ಕೆ, ಹಿಂಸೆಗೆ ತುತ್ತಾಗಬೇಕಾಯಿತು.

ತನ್ನ ಹೆಂಡತಿಗೂ ಬ್ರಿಜಲಾಲನಿಗೂ ಸಂಬಂಧ ಇರುವುದಾಗಿ ಹೇಳುತ್ತಾ ಖುದ್ದು ಬಾಬುರಾಮನೇ ತಿರುಗಾಡತೊಡಗಿದ. ಇದನ್ನು ಆಡಿ, ಹೆಂಡತಿಯನ್ನೂ ಥಳಿಸತೊಡಗಿದ. ಒಮ್ಮೆ ಡೀಸೆಲ್ ಸುರಿದು ಸಾಯಿಸಲೂ ಅವ ಪ್ರಯತ್ನಿಸಿದಾಗ, ಕಮಲಾ ಮನೆಬಿಟ್ಟಳು; ಮಗನೊಂದಿಗೆ ಹತ್ತಿರದ ಊರಿಗೆ (ಸರಧಾನಾ) ಬಂದು, ಅಲ್ಲಿನ ಒಬ್ಬ ಒಬ್ಬಂಟಿ ಮುದುಕಿಯ ದನ ಕಾಯುವ ಕೆಲಸ ವಹಿಸಿಕೊಂಡಳು.

ಕಳೆದು ಅಕ್ಟೋಬರ್ 6 ಗಂಡ ಎರಡನೇ ಮದುವೆಗೆ ತಯಾರಾಗುತ್ತಿದ್ದಾನೆಂಬ ವಿಷಯ ತಿಳಿದು ಕಮಲಾ ಬಟಚೆವರಾ ಗ್ರಾಮದ ಮನೆಗೆ ಬಂದಿದ್ದಳು. ಇವಳನ್ನು ನೋಡುತ್ತಲೇ ಗಂಡ "ಇಲ್ಲೇ ಇರು, ಈಗ ಬರ್ತೀನಿ' ಎಂದವನೇ ಹೋದ. ತುಸು ಹೊತ್ತಿನ ನಂತರ ಬಂದವರು ಪಂಚಾಯತಿಯ ದೂತರು. ಕಮಲಾಳನ್ನು ಆ ಕೂಡಲೇ ಅವರು ಪಂಚಾಯತಿಗೆ ಕರೆದೊಯ್ದರು. ಅಲ್ಲಿ ಬಾಬುರಾಮ ಇವಳ ಮೇಲೆ ದೂರು ನೀಡಿದ್ದ, ಬ್ರಿಜಲಾಲನ ಜೊತೆ ಅನೈತಿಕ ಸಂಬಂಧ ಇರುವುದೆಂಬ ದೂರಿನ ಮೇಲೆ ಪಂಚಾಯತಿ ವಿಚಾರಣೆ ಆರಂಭಿಸಿತು. ಕಮಲಾ ಬಾಯಿ ತೆರೆಯುವ ಮೊದಲೇ ಪಂಚಾಯತಿಯು ಶಿಕ್ಷೆಯನ್ನೂ ನೀಡಿತು. ಬಟಚೆವರಾ ಗ್ರಾಮ ಪಂಚಾಯತಿ ಅಧ್ಯಕ್ಷೆ ಮಹಿಳೆ. ಆದರೂ ಅಲ್ಲಿ ಅಧಿಕಾರ ಚಲಾವಣೆಯಾಗುತ್ತಿದ್ದುದೆಲ್ಲಾ ಆಕೆಯ ಗಂಡ ಅವಿಚಂದನದು. ತಮ್ಮ ಜಾತಿ ಹೆಣ್ಣೊಬ್ಬಳು ಅನೈತಿಕ ಅಪರಾಧದಲ್ಲಿ ತೊಡಗಿದ್ದು ಬಹುದೊಡ್ಡ ಅಪರಾಧವಾಗಿ ತಮ್ಮ ಜಾತಿಗೆ ಮಸಿ ಬಳಿದಂತಾಗಿದೆ ಎಂದು ಹೇಳಿ, "ಇಬ್ಬರ ತಲೆ ಬೋಳಿಸಿ, ಮುಖಕ್ಕೆ ಕಪ್ಪುಮಸಿ ಬಳಿಯಿರಿ; ಕತ್ತೆ ಮೇಲೆ ಕೂಡಿಸಿ, ಊರ ಹೊರಗೆ ತಳ್ಳಿ" ಎಂದು ಪಂಚಾಯತಿ ಶಿಕ್ಷೆ ಘೋಷಿಸಿತು.

ಬ್ರಿಜಲಾಲನನ್ನು ಹಿಡಿದು ತರಲಾಯಿತು. ಕಮಲಾ ಮತ್ತು ಬ್ರಿಜಲಾಲ ಇಬ್ಬರಿಗೂ ಈ ಅವಮಾನಕರ ಶಿಕ್ಷೆಯನ್ನು ಅದೇ ದಿನ ನೀಡಲಾಯಿತು. ಇಡೀ ಊರು ದನಿ ಕಳೆದುಕೊಂಡು ನೋಡಿತು.

"ಊರಿನ ಮರ್ಯಾದೆಯನ್ನು ಹರಾಜು ಹಾಕುವಂಥ ಕೃತ್ಯದಲ್ಲಿ ತೊಡಗಿದ್ದಕ್ಕಾಗಿ ಶಿಕ್ಷೆಗೆ ಗುರಿಯಾಗಿದ್ದಾಳೆ ಆ ಹೆಣ್ಣು" ಎನ್ನುವ ಮೂಲಕ ಮೇರಠ್‌ನ ಸೀನಿಯರ್ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ ಎ.ಕೆ. ರತೂರಿ ಅವರು ಪುರುಷ ಪ್ರಧಾನ ಸಮಾಜದ ದನಿಯಾಗಿದ್ದಾರೆ. ಹೆಣ್ಣೊಬ್ಬಳನ್ನು ಅಮಾನವೀಯವಾಗಿ ಶಿಕ್ಷೆಗೆ ಗುರಿಪಡಿಸಿದ ವ್ಯಕ್ತಿಗಳ ವಿರುದ್ಧ ಕಾನೂನು ಪ್ರಕಾರ ಮೊಕದ್ದಮೆಯನ್ನು ದಾಖಲು ಮಾಡಿಕೊಳ್ಳುವುದನ್ನು ಬಿಟ್ಟು, ರತೂರಿ ಇಂಥ ಮಾತಾಡಿರುವುದು ಶುದ್ಧ ನಾಚಿಕೆಗೇಡು.

ಸಾರ್ವಜನಿಕವಾಗಿ ಅವಮಾನ ಅನುಭವಿಸಿದ ಬ್ರಿಜಲಾಲ ಊರು ಬಿಟ್ಟಿದ್ದರೆ, ಕಮಲಾ ಕಂಕರಖೇರಾ ಪೊಲೀಸ್ ಠಾಣೆಯಲ್ಲಿ ಈ ಬಗ್ಗೆ ದೂರು ದಾಖಲು ಮಾಡಿದ್ದಾಳೆ. ತನ್ನನ್ನು ಬೆತ್ತಲೆಗೊಳಿಸಲಾಯಿತು ಹಾಗೂ ಅತ್ಯಾಚಾರಕ್ಕೆ ಗುರಿಪಡಿಸಲಾಯಿತು ಎಂದೂ ಕೂಡ

ಆಕೆ ತನ್ನ ದೂರಿನಲ್ಲಿ ಹೇಳಿಕೊಂಡಿದ್ದಾಳೆ. "ಬಾಬುರಾಮ ಸಹಿತ ಆರು ಜನರನ್ನು ಬಂಧಿಸಲಾಗಿದೆ; ಸೆಕ್ಷನ್ 498 (ಮನೆಯೊಳಗಣ ಹಿಂಸೆ) ಹಾಗೂ 354 (ಮಹಿಳೆಯ ಮಾನಭಂಗ)ಗಳ ಅಡಿಯಲ್ಲಿ ಕೇಸ್ ಹಾಕಲಾಗಿದೆ" ಎಂದಿರುವ ಅಸಿಸ್ಟೆಂಟ್ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ ನವನೀತ ಸೆಕೆರಾ, ಈ ಥರದ ಕೇಸ್‌ಗಳಲ್ಲಿ ಶಿಕ್ಷೆಯಾಗುವುದು ತುಂಬಾ ಅಪರೂಪ ಎಂಬ ಅಭಿಪ್ರಾಯವನ್ನೂ ವ್ಯಕ್ತಪಡಿಸುತ್ತಾರೆ.

ಪ್ರಕರಣದ ತೀರ್ಪು ಹೇಗೇ ಬರಲಿ; ಗಂಡನ ಅನ್ಯಾಯವನ್ನು ಪ್ರಶ್ನಿಸಲು, ಬಯಲಿಗೆ ಎಳೆಯಲು ಮುಂದೆ ಬಂದ ಕಮಲಾ ಧೈರ್ಯ ತೋರಿದ್ದಾಳೆ; ಪುರುಷ ಸಮಾಜದ ದೌರ್ಜನ್ಯಕ್ಕೆ ಸವಾಲೆಸೆದು ನಿಂತಿರುವ ಕಮಲಾಳಿಗೆ ನಮ್ಮ ಬೆಂಬಲ, ಸಹಾನುಭೂತಿ, ಧೈರ್ಯದ ಅವಶ್ಯಕತೆ ಇದೆ. ಮೀರತ್ ಜಿಲ್ಲಾ ಕೇಂದ್ರದಲ್ಲಿರುವ ಮಹಿಳಾ ಗುಂಪುಗಳು ಈ ಬಗ್ಗೆ ಎಲ್ಲಾ ನೆರವು, ಸಹಕಾರವನ್ನು ನೀಡಬೇಕಾಗಿದೆ.

*ಬಿ.ಎಸ್. ಶಾರದ*

## ಹೊಸ ಆಶಾಕಿರಣಕ್ಕೆ ನಾಂದಿಯಾದ ದೀಕ್ಷಿತಳ ಅಹವಾಲು

ಮಾರ್ಚ್ 1989ರಲ್ಲಿ ಪ್ರಾರಂಭವಾದ ದೀಕ್ಷಿತಾಳ ಜೀವನಾಂಶ ಕೋರಿಕೆಗೆ ಅಕ್ಟೋಬರ್ 1999ರಲ್ಲಿ ತೆರೆಬಿದ್ದಂತಾಗಿದೆ. ಒರಿಸ್ಸಾದ ಕಂಟಿಲೋ ಗ್ರಾಮದ ದ್ವಾರಿಕಾ ಪ್ರಸಾದ್ ಸತ್ಪತಿಯೆಂಬುವವನ ಜೊತೆ ಪ್ರೇಮಪಾಶಕ್ಕೆ ಸಿಲುಕಿದಳು. ಮದುವೆಯಾಗುವುದಾಗಿ ಆಶ್ವಾಸನೆ ಕೊಟ್ಟಿದ್ದರಿಂದ ಅವರಿಬ್ಬರಲ್ಲಿ ಲೈಂಗಿಕ ಸಂಪರ್ಕವೇರ್ಪಟ್ಟು ಆಕೆ ಗರ್ಭ ಧರಿಸಿದಳು. ಮದುವೆಯಾಗುವಂತೆ ಆಕೆ ಅವನನ್ನು ಕೋರಿಕೊಂಡಳು ಆತ ನಿರಾಕರಿಸಿದ.

ಇದರಿಂದ ನೊಂದ ದೀಕ್ಷಿತ್ ರಾಜ್ಯದ ಮುಖ್ಯಮಂತ್ರಿಯನ್ನೊಳಗೊಂಡಂತೆ ಇತರ ಅಧಿಕಾರಿಗಳಿಗೆ ತನ್ನ ಸಮಸ್ಯೆಯನ್ನು ಬರೆದು ಪರಿಹರಿಸುವಂತೆ ಕೇಳಿಕೊಂಡಳು. ಯಾರಿಗೂ ತನ್ನ ಕೂಗು ಕೇಳದಾಗ ಸ್ವಯಂ ಸತ್ಪತಿಯ ಕಚೇರಿಯ ಮುಂದೆ ನಿರಶನ ಕೈಗೊಂಡಳು. ಆಗ ಆ ಕಚೇರಿಯ ಉಪವಿಭಾಗಾಧಿಕಾರಿ ಹಾಗೂ ಇತರರ ಮಧ್ಯಸ್ಥಿಕೆಯಲ್ಲಿ ಆಕೆಯ ವಿವಾಹ ನಯಾಗಢದ ಜಗನ್ನಾಥ ದೇವಾಲಯದಲ್ಲಿ ಸತ್ಪತಿಯೊಂದಿಗೆ ಜರುಗಿತು. ಒತ್ತಾಯದ ವಿವಾಹ ಎಂದ ಸತ್ಪತಿ ಅವಳನ್ನು ತನ್ನ ತಂದೆಯ ಮನೆಗೆ ಕರೆದೊಯ್ಯಲು ನಿರಾಕರಿಸಿದ. ಆಕೆ ತನ್ನ ತಂದೆಯ ಮನೆಯಲ್ಲೇ ಉಳಿಯಬೇಕಾಯಿತು. ಅವಳು ಅಲ್ಲಿ ಒಂದು ಹೆಣ್ಣು ಮಗುವಿಗೆ ಜನ್ಮ ನೀಡಿದಳು.

ಮಗುವಿಗೂ ಹಾಗೂ ತನಗೂ ಜೀವನಾಂಶ ಕೊಡಿಸುವಂತೆ ಕೋರಿ ಆಕೆ ನಯಾಗಢದ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯದ ಮೊರೆಹೊಕ್ಕಳು. ಸಲ್ಲಿಸಿದ ಅರ್ಜಿ ಪರಿಶೀಲಿಸಲ್ಪಟ್ಟು ಆಕೆ ತಿಂಗಳಿಗೆ 400 ರೂ. ಹಾಗೂ ಮಗುವಿಗೆ 200 ರೂ. ಮಾಸಾಶನಕ್ಕೆ ಅರ್ಹರೆಂದು ಕೋರ್ಟು ಆದೇಶ ನೀಡಿತು. ಮಗು ತನ್ನದಲ್ಲವೆಂದ ಸತ್ಪತಿ, ಇದು ಒತ್ತಾಯ ಪೂರ್ವಕ ಮದುವೆಯೆಂದು ಹೈಕೋರ್ಟ್ ನಂತರ ಸುಪ್ರೀಂ ಕೋರ್ಟ್‌ನ ಮೊರೆಹೊಕ್ಕ. ಮಗು ತನ್ನದಲ್ಲವೆಂದ ಆತ DNA ಟೆಸ್ಟ್‌ಗೆ ಒಳಪಡಲು ನಿರಾಕರಿಸಿದ.

ಇದೆಲ್ಲವನ್ನೂ ಕೂಲಂಕುಷವಾಗಿ ಪರಿಶೀಲಿಸಿದ ಸುಪ್ರೀಂಕೋರ್ಟ್ ಮೊದಲಿನ ತೀರ್ಪನ್ನು ಎತ್ತಿಹಿಡಿದುದಲ್ಲದೆ ಈ ಕೆಳಗಿನ ಹೊಸ ತೀರ್ಪನ್ನು ಕೊಟ್ಟಿತು.

"ಪತಿಯಿಂದ ವಿರಸದಿಂದ ಬೇರ್ಪಟ್ಟ ಅಥವಾ ವಿಚ್ಛೇದನ ಪಡೆದ ಪತ್ನಿ ವಿಧ್ಯುಕ್ತವಾಗಿ ವಿವಾಹವಾಗಿರದಿದ್ದರೂ, ಪತಿಯಿಂದ ಮಾಸಾಶನ ಪಡೆಯಲು ಅರ್ಹಳಾಗಿರುತ್ತಾಳೆ" ಹಾಗೂ ಭಾರತೀಯ ಅಪರಾಧ ಸಂಹಿತೆಯ 125ನೇ ಅನುಚ್ಛೇದದ ಅನ್ವಯ ವಿವಾಹ ಪ್ರಕ್ರಿಯೆ ನಡೆದಿದೆ ಎಂದು ನ್ಯಾಯಾಧೀಶರಿಗೆ ಮನವರಿಕೆಯಾದರೆ ಪತ್ನಿಯ ಪರವಾಗಿ ತೀರ್ಪು ನೀಡಬಹುದು. ವಿವಾಹ ಸಾಂಪ್ರದಾಯಿಕ ವಿಧಾನದಲ್ಲಿ ನಡೆದಿರಲೇಬೇಕು ಎಂಬ ನಿಯಮವಿಲ್ಲ ಎಂದು ನ್ಯಾಯಮೂರ್ತಿಗಳು ತಮ್ಮ ತೀರ್ಪಿನಲ್ಲಿ ತಿಳಿಸಿದ್ದಾರೆ.

ಇದರಿಂದಾಗಿ ನಂಬಿಸಿ ಕೈಕೊಟ್ಟವರು, ಅಲ್ಲಿ ಇಲ್ಲಿ ಎಲ್ಲೋ ಮಾಲೆ ಬದಲಾಯಿಸಿ ಅಥವಾ ತಾಳಿಕಟ್ಟಿದ ಶಾಸ್ತ್ರ ಮಾಡಿ ನಂತರ ನನಗೆ ಅವಳಿಗೆ ಸಂಬಂಧವೇ ಇಲ್ಲ ಎಂಬ ಜಾಣ್ಮೆ ತೋರಿ ಕೆಲ ಹೆಣ್ಣು ಮಕ್ಕಳ ಬಾಳು ಗೋಳಿಗೆ ದೂಡುತ್ತಿದ್ದವರನ್ನು, ಜಾರಿಕೊಳ್ಳುತ್ತಿದ್ದವರನ್ನು, ಹಾಗೆಯೇ ವಿರಸದಿಂದ ದೂರವಾದ ಮಾತ್ರಕ್ಕೆ ಯಾವುದೇ ಮಾಸಾಶನ ಕೊಡದ ಗಂಡಸರು ಈ ಮೂಲಕ ಜಾರಿಕೊಳ್ಳಲಾರದ ಒಂದು ಹೊಸ ಅಸ್ತ್ರ ಸುಪ್ರೀಂ ಕೋರ್ಟ್ ನೀಡಿ ಹೊಸ ಆಶಾಕಿರಣಕ್ಕೆ ನಾಂದಿ ಹಾಡಿದೆ.

# 'ಸತಿ ಸಹಗಮನ - ಗೌರವದ ಸಂಕೇತ'!

ಭಾರತದ ಪಠ್ಯ ಪುಸ್ತಕಗಳ ಲೇಖಕರು ಪ್ರಾಚೀನ ಭಾರತದ ಮಹಿಳೆಯರ ಸ್ಥಾನ-ಮಾನಗಳನ್ನು ಕುರಿತು ವಿವರಿಸುವಾಗ ಅಸ್ಪಷ್ಟ ಹಾಗೂ ದ್ವಿಮುಖ ನಿಲುವು ಹೊಂದಿರುವುದು ಕಂಡುಬರುತ್ತದೆ. ಗುಜರಾತ್ ರಾಜ್ಯದ ಸಮಾಜ ಶಾಸ್ತ್ರದ ಪುಸ್ತಕಗಳಲ್ಲಿ ಮನುಸ್ಮೃತಿಯ ಮೇಲೆ ಯಾವುದೇ ವಿಮರ್ಶಾತ್ಮಕ ಟೀಕೆಗಳಿಲ್ಲ. "ಮನುಸ್ಮೃತಿ ಅಥವಾ ಮನುಧರ್ಮ ಶಾಸ್ತ್ರ ಹಿಂದೂ ಕೋಡನ್ನು ರೂಪಿಸುವಲ್ಲಿ ಸಹಕಾರಿಯಾಗಿವೆ, ಹಾಗೆಯೇ ಪುರಾಣಗಳು ಧಾರ್ಮಿಕ ಗ್ರಂಥಗಳಾಗಿರುವುದರ ಜೊತೆಗೇ ಭಾರತದ ಚರಿತ್ರೆಯ ಸಂಪತ್ತಾಗಿವೆ.' ಈ ಹಿಂದೂ ಕೋಡ್ ಎಷ್ಟು ಸಮಾನ ಅಥವಾ ಅಸಮಾನತೆ ಹೊಂದಿದೆ? ಇದರಲ್ಲಿ ಮಹಿಳೆಯರಿಗಿದ್ದ ಸ್ಥಾನ-ಮಾನ ಏನು? ಪಠ್ಯಪುಸ್ತಕಗಳಲ್ಲಿ ಈ ಬಗ್ಗೆ ಅನುಮಾನಾಸ್ಪದ ಮೌನವಿದೆ.

ಆದರೆ ಗ್ರೀಕ್ ನಾಗರಿಕತೆಯಲ್ಲಿ ಮಹಿಳೆಯರಿಗಿದ್ದ ಕೀಳು ಸ್ಥಾನ-ಮಾನದ ಬಗ್ಗೆ ಅದೇ 9ನೆಯ ತರಗತಿಯ ಗುಜರಾತಿನ ಸಮಾಜಶಾಸ್ತ್ರದಲ್ಲಿ ಸ್ಪಷ್ಟವಾದ ಹೇಳಿಕೆ ಇದೆ. "ಗ್ರೀಕ್‌ನ ಅಥೆನ್ಸ್ ಹಾಗೂ ಇತರ ರಾಜ್ಯಗಳಲ್ಲಿ ಮಹಿಳೆಯರ ಸ್ಥಾನ-ಮಾನ ಕೀಳುಮಟ್ಟದ್ದಾಗಿತ್ತು. ಸಾರ್ವಜನಿಕ ಜೀವನದಲ್ಲಿ ಇವರ ಭಾಗವಹಿಸುವಿಕೆಗೆ ಅವಕಾಶವಿರಲಿಲ್ಲ. ಹಾಗೂ ಇವರಿಗೆ ಶಿಕ್ಷಣದ ಅವಕಾಶವಿರಲಿಲ್ಲ. ಮನೆಯೇ ಅವರಿಗೆ ಸೂಕ್ತ ಸ್ಥಾನ ಎಂದು ಪರಿಗಣಿಸಲಾಗುತ್ತಿತ್ತು. ಓಟಿನ ಹಕ್ಕನ್ನೂ ಸಹ ಅವರು ಹೊಂದಿರಲಿಲ್ಲ. ಆ ಕಾಲದ ಸಾಹಿತ್ಯದ ಪರಿಕರಗಳಲ್ಲಿ ಅವರನ್ನು ಚಿತ್ರಿಸಿರುವುದನ್ನು ಅವಮಾನಕರ ರೀತಿಯಲ್ಲಿ ಎಂದು ಭಾವಿಸಬಹುದು'.

ICSE ಪಠ್ಯವನ್ನು ಓದುವ ಮಕ್ಕಳಿಗೆ ರಜಪೂತರ ಈ ತಿಳುವಳಿಕೆಯನ್ನು ನೀಡಲಾಗಿದೆ. ರಜಪೂತರಿಗೆ ಮಹಿಳೆಯರ ಬಗ್ಗೆ ಆಳವಾದ ಗೌರವ ಇತ್ತು. ಇದಾದ ನಂತರದ ಕೆಳಗಿನ ಪ್ಯಾರಾದಲ್ಲಿ ಪಠ್ಯಪುಸ್ತಕ ಹೇಳುತ್ತದೆ, "ಕುಟುಂಬದಲ್ಲಿ ಹೆಣ್ಣಿನ ಜನನವನ್ನು ಕೆಟ್ಟ ಚಿಹ್ನೆ ಎಂದು ಭಾವಿಸಲಾಗುತ್ತಿತ್ತು. ಬಹಳಷ್ಟು ಸಂದರ್ಭದಲ್ಲಿ ಹುಟ್ಟಿದ ತಕ್ಷಣವೇ ಆ ಮಗುವನ್ನು ಕೊಲೆ ಮಾಡಲಾಗುತ್ತಿತ್ತು."

'ರಜಪೂತರ ಕೊಡುಗೆ' ಎಂಬ ಅಧ್ಯಾಯ (New ICSE History and Civics), Editer by Hart and Barrow, Part I) ರಜಪೂತರಿಗೆ ವಿಶೇಷವಾದ ಸ್ಥಾನವನ್ನೇ ನೀಡುತ್ತದೆ. ಇವರು ಭಾಥತದ ಚರಿತ್ರೆಯಲ್ಲಿ ಕೊನೆಯ ಹಿಂದೂ ರಾಜರು ಎಂಬುದು ಗಮನಾರ್ಹ ವಿಚಾರ ಎನ್ನುತ್ತಾರೆ. ಹಾಗಾಗಿಯೇ 'ರಜಪೂತರ ಸಂಪ್ರದಾಯ', ರಜಪೂತರ 'ಮಹಿಳೆಯರ ಬಗ್ಗೆಗಿನ ಗೌರವ' ಎಂಬ ಅಧ್ಯಾಯಗಳನ್ನೇ ಬರೆಯಲಾಗಿದೆ.

"ರಜಪೂತರು ತಮ್ಮ ಮಹಿಳೆಯರನ್ನು ಗೌರವಿಸುತ್ತಿದ್ದರು. ಹೆಂಗಸರೂ ಆತ್ಮ-ಗೌರವ ಹೊಂದಿದ್ದರು. ಅವರು ಶತ್ರುಗಳ ಕೈಲಿ ಸಿಕ್ಕುಬೀಳುವುದಕ್ಕಿಂತ ತಮ್ಮನ್ನು ತಾವೇ ಬೆಂಕಿಗೆ ಆಹುತಿ ಕೊಟ್ಟುಕೊಂಡುಬಿಡುತ್ತಿದ್ದರು. 'ಮಹಿಳೆಯರ ಸ್ಥಾನಮಾನ' - ಎಂಬಲ್ಲಿ ರಜಪೂತ ಮಹಿಳೆಯರು ಸ್ವತಂತ್ರವಾಗಿದ್ದರು. ಸ್ವಯಂವರಗಳಲ್ಲಿ ಇವರು ತಮ್ಮ ಗಂಡಂದಿರನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಹೊಂದಿದ್ದರು. ಅವರು ಶಿಕ್ಷಣ ಪಡೆದಿದ್ದರು ಹಾಗೂ ಸಂಸ್ಕೃತವನ್ನು ಓದಲು, ಬರೆಯಲು ಬಲ್ಲವರಾಗಿದ್ದರು. ಸಾರ್ವಜನಿಕ ಜೀವನದಲ್ಲಿ ಇವರು ಭಾಗವಹಿಸುತ್ತಿದ್ದರು. ವಿಧವೆಯರ ಮರುಮದುವೆಗೆ ಅವಕಾಶವಿರಲಿಲ್ಲ. ಇವರು ಅತ್ಯಂತ ಧಾರ್ಮಿಕ ಪ್ರವೃತ್ತಿಯವರಾಗಿದ್ದರು. ಇವರು ತಮ್ಮ ಬಹು ಸಮಯವನ್ನು ರಾಮಾಯಣ ಹಾಗೂ ಮಹಾಭಾರತದ ಪವಿತ್ರ ಕತೆಗಳನ್ನು ಕೇಳುವುದರಲ್ಲಿ ಕಳೆಯುತ್ತಿದ್ದರು.".

ಬಹುಪತ್ನಿತ್ವ ಹಾಗೂ ಹೆಣ್ಣು ಮಗುವಿನ ಕೊಲೆ : ಶ್ರೀಮಂತ ಹಾಗೂ ಅಧಿಕಾರ ವರ್ಗದವರು ಬಹುಪತ್ನಿತ್ವವನ್ನು ಆಚರಿಸುತ್ತಿದ್ದರು. ಒಬ್ಬ ಹೆಂಗಸನ್ನು ಮುಖ್ಯ ಹೆಂಡತಿ ಎಂದು ಪರಿಗಣಿಸಲಾಗುತ್ತಿತ್ತು. ಹೆಣ್ಣಿನ ಜನನ ಕುಟುಂಬದಲ್ಲಿ ಕೆಟ್ಟ ಚಿಹ್ನೆಯಾಗಿತ್ತು. ಈ ಮಗುವನ್ನು ಹುಟ್ಟಿದ ತಕ್ಷಣವೇ ಕೊಲೆ ಮಾಡಲಾಗುತ್ತಿತ್ತು.

ಹೆಣ್ಣು ಮಕ್ಕಳ ಪಾವಿತ್ರ್ಯತೆಯನ್ನು ಕಾಪಾಡುವುದಕ್ಕಾಗಿ ಅವರಿಗೆ ಚಿಕ್ಕವಯಸ್ಸಿನಲ್ಲಿಯೇ ಮದುವೆ ಮಾಡಲಾಗುತ್ತಿತ್ತು. ಮದುವೆಯಾದಾಕ್ಷಣ ತಮ್ಮ ಗಂಡಂದಿರಿಗೆ ತಮ್ಮನ್ನು ಅರ್ಪಿಸಿಕೊಳ್ಳುತ್ತಿದ್ದ ಹೆಂಗಸರು ತಮ್ಮ ಮಾನ, ಗೌರವಕ್ಕಾಗಿ ತಮ್ಮ ಪ್ರಾಣವನ್ನೇ ಅರ್ಪಿಸಿಬಿಡುತ್ತಿದ್ದರು. ಈ ರಜಪೂತರು ಅಸ್ಪೃಶ್ಯರ ಬಗ್ಗೆಯೂ ಯಾವುದೇ ಟೀಕೆಗಳಿಲ್ಲದೇ ಪಠ್ಯಪುಸ್ತಕಗಳಲ್ಲಿ ನಿರೂಪಿಸಲಾಗಿದೆ.

ಗುಜರಾತ್ ರಾಜ್ಯದ 9ನೆಯ ತರಗತಿಯ ಸಮಾಜಶಾಸ್ತ್ರ ಈ ಮೇಲ್ಕಂಡ ರಜಪೂತರ ಕಾಲದ ಹೆಣ್ಣುಮಕ್ಕಳ ಸ್ಥಾನ-ಮಾನವನ್ನು ಟೀಕೆಗಳಿಲ್ಲದೇ ಮಕ್ಕಳಿಗೆ ತಿಳಿಸುವುದು ಎಷ್ಟು ಸೂಚ್ಯ ಎಂಬುದನ್ನು ಯೋಚಿಸಬೇಕಾಗಿದೆ.

*Communalism*

ಮೂಲ - *Combat 1999 October*

## ‘ಪ್ರಜಾವಾಣಿ’ ೧೫ ದಿ. ೮.೧೧.೯೯ರ ಸಂಚಿಕೆಯಲ್ಲಿ ಪ್ರಕಟವಾದ ಒಂದು ವಾರ್ತೆ ಹೀಗಿದೆ.

ಕಲಬುರ್ಗಿ ನ. ೫ : ಕನಿಷ್ಠ ವಯಸ್ಸು (18) ತುಂಬುವ ಮುಂಚಿನ ಹೆಣ್ಣಿನ ಮದುವೆ ಅಸಿಂಧು ಅಲ್ಲ, ಎಂದು ಇಲ್ಲಿನ ಕುಟುಂಬ ನ್ಯಾಯಾಲಯ ತೀರ್ಪು ನೀಡಿದೆ. ನ್ಯಾಯಾಧೀಶ ಶ್ರೀ ಎಚ್. ಎಂ. ಭರತೇಶ ಅವರು ಪ್ರಕರಣವೊಂದರ ತೀರ್ಪಿನಲ್ಲಿ ಹೀಗೆ ಅಭಿಪ್ರಾಯಪಟ್ಟಿದ್ದಾರೆ.

ಕಲಬುರ್ಗಿಯವರು ಅರುಣಾಬಾಯಿ ಎಂಬುವರು ತಮ್ಮ ಪತಿ ವಿಠ್ಠಲ್ ಎಂಬುವರ ವಿರುದ್ಧ, ಜೀವನಾಂಶಕ್ಕಾಗಿ ಹೂಡಿದ್ದ ಮೊಕದ್ದಮೆ ಸಂಬಂಧ, ಈ ತೀರ್ಪು ಹೊರಬಿದ್ದಿದೆ.

ಅರುಣಾಬಾಯಿ 1981ರಲ್ಲಿ ವಿಠ್ಠಲರ ಜತೆ ವಿವಾಹವಾದರು. ಆಗ ಆಕೆಯ ವಯಸ್ಸು, ಶಾಲಾ ಪ್ರಮಾಣ ಪತ್ರದ ರೀತ್ಯ 14 (ಹದಿನಾಲ್ಕು) ವರ್ಷ. ಇದನ್ನೇ ನೆಪವಾಗಿಟ್ಟುಕೊಂಡು ವಿಠ್ಠಲ್, “ನನ್ನ-ಆಕೆಯ ವಿವಾಹ ಬಾಲ್ಯವಿವಾಹ ನಿಷೇಧ ಕಾನೂನಿನ ಅಡಿಯಲ್ಲಿ ಆದದ್ದು. ಆದ್ದರಿಂದ ಆಕೆಯನ್ನು ಮದುವೆಯಾದ ಹೆಂಡತಿ ಎಂದು ಕರೆಯಲು ಸಾಧ್ಯವಿಲ್ಲ. ಮದುವೆಯ ಸಂದರ್ಭದಲ್ಲಿ ಅರುಣಾಬಾಯಿಗೆ 18 ವರ್ಷ ಆಗಿರಲಿಲ್ಲ. ಈ ಮದುವೆ ಕಾನೂನುಬದ್ಧ ಅಲ್ಲವಾದ್ದರಿಂದ ನಾನು ಆಕೆಯನ್ನು ಬಿಟ್ಟ ಮೇಲೆ ಜೀವನಾಂಶ ನೀಡಲು ಬದ್ಧನಲ್ಲ”. ಈ ಎಚ್. ಎಂ. ಭರತೇಶ ತಮ್ಮ ತೀರ್ಪನ್ನೂ ಹೀಗೆ ಬರೆದಿದ್ದಾರೆ.

ಈ ಪ್ರಕರಣದಲ್ಲಿ ಇವರಿಬ್ಬರೂ ಗಂಡ-ಹೆಂಡತಿಯರಾಗಿ ಕೆಲವು ಕಾಲ ಜೀವನ ಮಾಡಿದ್ದಾರೆ. ಈ ಅವಧಿಯಲ್ಲಿ ಮಕ್ಕಳು ಹುಟ್ಟುವ ಸಾಧ್ಯತೆ ಇದ್ದಿತು. ಹೆಂಡತಿ, ಕಡಿಮೆ ವಯಸ್ಕಳು (Minor) ಎಂಬ ಒಂದೇ ಕಾರಣ (ನೆಪ) ಒಡ್ಡಿ ಈ ವಿವಾಹ ಬಂಧನ (ದಾಂಪತ್ಯ)ವನ್ನು ತಾಂತ್ರಿಕವಾಗಿ ಅಸಿಂಧು ಎಂದು ಘೋಷಿಸುವುದು ಅಮಾನವೀಯವಾಗುತ್ತದೆ. ಕರ್ನಾಟಕ ಹೈಕೋರ್ಟು 1977ರಲ್ಲಿ ನೀಡಿದ್ದ ಒಂದು ತೀರ್ಪಿನಲ್ಲಿ, 21 ವರ್ಷ ತುಂಬಿರದ ಪತಿಯನ್ನು ಅಸಿಂಧು ಎಂಬ ಕೆಳಕೋರ್ಟಿನ ಒಂದು ತೀರ್ಪನ್ನು ತಪ್ಪು ಎಂದು ಹೇಳಿತ್ತು.

ಅರ್ಜಿದಾರಳಾದ ಅರುಣಾಬಾಯಿ, ತನ್ನ ಕಾನೂನುಬದ್ಧ ಹೆಂಡತಿ ಅಲ್ಲ ಮತ್ತು ಆಕೆಗೆ ಜೀವನಾಂಶ ಕೊಡಬೇಕಾಗಿಲ್ಲ ಎಂಬ ವಿಠ್ಠಲ್ ವಾದ ಹುರುಳಿಲ್ಲದ್ದು.

ಅರುಣಾಬಾಯಿಗೆ ಜೀವನ ನಿರ್ವಹಣೆ ಅಸಾಧ್ಯವಾಗಿದೆ. ಪತಿಗೆ ಜೀವನಾಂಶ ಕೊಡುವ ಸಾಮರ್ಥ್ಯ ಇದೆ. ಆದರೆ ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಿದ್ದಾರೆ ಮತ್ತು ವಿವಾಹ ಕಾನೂನನ್ನು ಉಲ್ಲೇಖಿಸಿ ಆಕೆಗೆ ಅನ್ಯಾಯ ಬಗೆಯುತ್ತಿದ್ದಾರೆ. ಇದು ಬೇಜವಾಬ್ದಾರಿ ನಡತೆ. 18 ವರ್ಷ ತುಂಬುವ ಮೊದಲು ಮದುವೆಯಾದ ಹೆಂಗಸು, ತನ್ನ ಪತಿಯಿಂದ ಜೀವನಾಂಶ ಪಡೆಯುವುದಕ್ಕೆ ಬಾಲ್ಯವಿವಾಹ ನಿಷೇಧ ಕಾಯ್ದೆ ಅಥವಾ ಹಿಂದೂ ವಿವಾಹ ಕಾಯ್ದೆ ಅಡ್ಡಿ ಬರಲಾರದು. ಆದ್ದರಿಂದ ಅರುಣಾಬಾಯಿಗೆ ಪ್ರತ್ಯೇಕ ವಸತಿ ಕೊಡುವುದಕ್ಕೆ ಮತ್ತು ಜೀವನಾಂಶವನ್ನು ಸಲ್ಲಿಸುವುದಕ್ಕೆ ವಿಠ್ಠಲ ಬದ್ಧರಾಗಿದ್ದಾರೆ.

*ಶ್ಯಾಮಸುಂದರ ಬಿದರಕುಂದಿ*

ಮಾನಸದಲ್ಲಿ ಪ್ರಕಟವಾದ ಲೇಖನಗಳಿಗೆ ನಿಮ್ಮ ಅನಿಸಿಕೆ, ಪ್ರತಿಕ್ರಿಯೆಗಳನ್ನು ಬರೆದು ಕಳಿಸಿ. ಇವುಗಳನ್ನು ಓದುಗರ ವಿಭಾಗ ಕಾಲಂನಲ್ಲಿ ಪ್ರಕಟಿಸಲಾಗುವುದು.

– *ಸಂಪಾದಕ ಮಂಡಳಿ*




## ಆವರಣ

ಹುಚ್ಚೆದ್ದು ಹೊಳೆ ತುಂಬಿ
ಮಹಾಪೂರ ಆಗದುಂಟೇ?
ಬಿರುಗಾಳಿ ಬೀಸಿದ ರಭಸಕ್ಕೆ
ಗಿಡಮರಗಳಲ್ಲಾಡದಿರುವದುಂಟೇ?
ಉಕ್ಕೇರಿದ ಸಮುದ್ರದಿ
ತೆರೆಗಳೇಳದಿರುವದುಂಟೇ?
ಅದೂ ಪ್ರಕೃತಿ....
ಹೆಣ್ಣೂ ಪ್ರಕೃತಿಯೆಂದು
ವರ್ಣಿಸದಿರುವವರುಂಟೇ?
ಮಹಾಪೂರದ ಮನವಿಲ್ಲವೇ?
ಬಿರುಗಾಳಿಯ ರಭಸವಿಲ್ಲವೇ
ಉಕ್ಕೇರುವ ಸಾಹಸವಿಲ್ಲವೇ?
ನಿನ್ನೊಳು ಏನುಂಟು? ಏನಿಲ್ಲ?
ಅರಿಯಲು ಮನಬಾರದುಂಟೇ?
ಅನಿಷ್ಟ ಪದ್ಧತಿಗಳ ಆವರಣದೊಳು
ಬತ್ತಿನಿಂತ ಸೆಲೆಯಾಗುಳಿಯದೇ
ನೀನೊಮ್ಮೆ ಉಕ್ಕೇರಿ....
ಹೊರಹರಿದು ಹಿಂದಿನಿಂದಲೂ
ನಿನ್ನ ಸುತ್ತೂರಿದು ಬಂದ
ಏನೆಲ್ಲವನ್ನೂ ಕಿತ್ತೊಗೆದು
ಕಡಲ ಭೋರ್ಗರೆದು
ದಂಡೆ, ಬಂಡೆಗಪ್ಪಳಿಸಿದಂತೊಮ್ಮೆ
ಭೋರ್ಗರೆದು ಸಮಾಜದೊಳಗಣ
ಅನಿಷ್ಟ ಪದ್ಧತಿಗಳ ದಂಡೆ,
ಬಂಡೆಗಳಿಗಪ್ಪಿಸಿ ನೋಡಬಾರದೇ?

*ಲೀಲಾ ಕಲಕೋಟಿ*

## ಎನಿತು ಕೊಂಡಾಡಲವ್ವ

ಗಂಡನಿವ, ಗಂಡನಿವ
ಗಂಡನಿವನೆಂದು
ನಾ
ಎನಿತು ಕೊಂಡಾಡಲವ್ವ

ಎನ್ನ ಗುಂಡಿಗೆಗೆ
ಪಿಸ್ತೂಲಿನ ಗುಂಡಾಗಿ
ಬಂದು ಬಡಿದವ
ನನ ಗಂಡ ನನ ಗಂಡ
ಎನುವ ಪುಟ್ಟ ಹೃದಯಕೆ
ಕೆಂಡದುಂಡೆಯ ತುರುಕಿದವ

ಸುಂದರವಾದ ನನ್ನ ಕನಸುಗಳನ್ನು
ಗುಂಡಿನ ಅಮಲಿನಲಿ
ಗುಂಡಾಡಿಸಿ ನುಣ್ಣಗೆ ರುಬ್ಬಿದವಾ
ನಿನ ಗಂಡ ನಾನೆಂದು
ಕೊಬ್ಬಿದವ, ಉಬ್ಬಿದವ
ಅಡಿಗಡಿಗೆ ಘಂಡಾಂತರವಾದವ

ಗಂಡನಿವ ಗಂಡನಿವ
ನನ್ನೆದೆಯಲ್ಲಿ
ಗುಂಡುಕಲ್ಲನ್ನಿಟ್ಟವ
ಈ ಹೊರೆಯ ನಾಹೇಗೆ ಹೊರಲವ್ವ
ಅನುಭವಿಸಲವ್ವ

ಬಹುದಿನಗಳ ಗಂಡನೆಂಬ
ಮಧುರ ಭಾವನೆಗಳಿಗೆ
ಗುಂಡು ಸೂಜಿಗಳಿಂದ
ಚುಚ್ಚಿ ಸಿಂಗರಿಸಿದವ

ಗುಂಡಿನ ಗಮ್ಮತ್ತಿನಲ್ಲಿ
ಚಂದದ ನನ್ನ ಬಾಳನ್ನು
ಚರಂಡಿಗೆ ಸುರಿದು ಬಿಟ್ಟಿದ
ನಿನ (ಘಂಡ) ಗಂಡ ನಾನೆಂದು
ನುಡಿನುಡಿಗೆ ಗುಡುಗಿದವ
ಈ ಪರಿಯ ಗಂಡನ
ನಾ
ಎನಿತು ಕೊಂಡಾಡಲವ್ವ

– *ಜಿ. ವಿ. ವೇದವಲ್ಲಿ*

# ಬಾಲ್ಯಾವಸ್ಥೆ - "ದಿ ಸೆಕೆಂಡ್ ಸೆಕ್ಸ್" ಮೂಲ : ಸಿಮನ್ನ ದಿ ಬುವಾ

*ಎಚ್. ಎಸ್. ಚಂಪಾವತಿ*

ಸಮಾನಬಲಗಳನ್ನು ಹೊಂದಿ ಉದ್ಭವಿಸುವ ಜೀವಿಗಳಲ್ಲಿ, ಗಂಡನ್ನು ಸೃಷ್ಟ್ಯಾತ್ಮಕವಾಗಿಯೂ, ಸೃಜನಶೀಲಾತ್ಮಕವಾಗಿಯೂ ರೂಪಿಸುವ ನಾಗರೀಕತೆ, ಹೆಣ್ಣನ್ನು ಅವಲಂಬಿತ ಮನೋಭಾವದ ಕೀಳರಿಮೆಯೊಡನೆ ಗಂಡಿನ ಅಡಿಯಾಳಾಗಿ ಪ್ರಪಂಚದಲ್ಲಿ ಅಡಿ ಇಡುವಂತೆ ರೂಪಿಸುವಲ್ಲಿ ಮಹತ್ತರವಾದ ಪಾತ್ರ ವಹಿಸುತ್ತದೆ. ಜೀವಿಯೊಂದು ಗಂಡು, ಹೆಣ್ಣೆಂದು ಅದು ಹೊಂದಿರುವ ಲೈಂಗಿಕ ಅಂಗಾಂಗಳಿಂದ ನಿರ್ಧರಿಸಲ್ಪಡುವುದಿಲ್ಲ. ಏಕೆಂದರೆ ಪ್ರತಿಯೊಂದು ಮಾನವ ಜೀವಿಯೂ ಪ್ರಪಂಚ ಜ್ಞಾನದ ಅರಿವು ಪಡೆಯುವುದು ಅದು ಹೊಂದಿರುವ ಕೈ ಹಾಗೂ ಕಣ್ಣುಗಳಿಂದ.

ಮಾನವ ಜೀವಿಯು ಪ್ರಾರಂಭಿಕ ಚಟುವಟಿಕೆಗಳಲ್ಲಿ ಹೆಣ್ಣು, ಗಂಡೆಂಬ ಪ್ರಭೇದಗಳು ತೋರುವುದಿಲ್ಲ. ಮೊಲೆ ಕುಡಿಯುವುದರಲ್ಲಿ, ಮುದ್ದಿಸುವುದರಲ್ಲಿ, ಇನ್ನಿತರ ಅನೇಕ ರೀತಿಯ ಚಟುವಟಿಕೆಗಳಲ್ಲಿ, ಹೆಣ್ಣು ಮಗು, ಗಂಡು ಮಗುವಿನ ರೀತಿಯೇ ಸೃಷ್ಟ್ಯಾತ್ಮಕ ಭರವಸೆಯನ್ನೇ ತೋರುತ್ತದೆ. ಹನ್ನೆರಡು ವರ್ಷದವರೆಗೆ ಈ ವಿಭಿನ್ನ ಜೀವಿಗಳಲ್ಲಿ ಗುರುತರವಾದ ವ್ಯತ್ಯಾಸಗಳು ಕಂಡುಬರುವುದಿಲ್ಲ. ಹನ್ನೆರಡು ವರ್ಷದವರೆಗೆ ತನ್ನ ಸಹೋದರನಷ್ಟೆ ಬಲಶಾಲಿಯಾಗಿ ಹೆಣ್ಣು ಗುರುತರವಾದ ಚಟುವಟಿಕೆಗಳನ್ನು ಸೃಷ್ಟ್ಯಾತ್ಮಕವಾಗಿಯೇ ತೋರಿಸಬಲ್ಲಳು. ಆದರೆ ನಂತರದ ವರ್ಷಗಳಲ್ಲಿ ಉಂಟಾಗುವ ದೈಹಿಕ ಬದಲಾವಣೆಗಳು, ಹಾಗೂ ಈ ಬಗ್ಗೆ ಹಿರಿಯರ, ಸುತ್ತಮುತ್ತಲಿನವರ ನಡತೆಗಳು ಆಕೆಯಲ್ಲಿ ತಟಸ್ಥ ಭಾವನೆಯನ್ನು ಉಂಟುಮಾಡುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಮಗುವಿನಲ್ಲಿ ಉಂಟಾಗುವ ದೈಹಿಕ ಬದಲಾವಣೆಯನ್ನು ಕುಟುಂಬದ ಹಿರಿಯರು, ಸಂಬಂಧಿಗಳು, ಸುತ್ತಮುತ್ತಲಿನ ಜನ, ಹಾಗೂ ಒಟ್ಟಾಗಿ ಸಮಾಜ ಗುರುತಿಸುವ ರೀತಿ. ಹನ್ನೆರಡು ವರುಷಗಳ ನಂತರ ಹುಡುಗನು ಗಂಡೆಂಬ ಹಿರಿತನದ ಪ್ರಜ್ಞೆಯನ್ನು, ಸ್ವಾವಲಂಬಿತನದ ಆಕಾಂಕ್ಷೆಯನ್ನೂ ಗುರುತಿಸಿಕೊಳ್ಳುವಲ್ಲಿ ತನ್ನ ದೈಹಿಕ ಬದಲಾವಣೆಯನ್ನು ಹೆಮ್ಮೆಯಿಂದ ಪ್ರದರ್ಶಿಸಿ ಕೊಳ್ಳುತ್ತಾನೆ. ಹೀಗೆ ಹೆಮ್ಮೆಗೆ ಕಾರಣವಾಗುವ ಗಂಡಸಿನ ದೈಹಿಕ ಬದಲಾವಣೆಯ ಮನೋಭಾವ ಹೆಣ್ಣಿಗೆ ಇರುವುದಿಲ್ಲ. ಚಿಗುರುವ ಮೀಸೆ, ಬೆಳೆಯುವ ದಾಡಿ, ಅಂಗಾಂಗಳಲ್ಲಿ ಬೆಳೆಯುವ ರೋಮ ಗಂಡಸಿನ ಈ ದೈಹಿಕ ಬದಲಾವಣೆಯಲ್ಲಿ, ಮಾನಸಿಕ ವೇದನೆಗೆ ಕಾರಣವಾಗಬಹುದಾದ ಯಾವ ನೋವೂ ಇರುವುದಿಲ್ಲ. ಆದರೆ ಹೆಣ್ಣು ಮಗು ಗಂಡಸಿನಷ್ಟು ಸಹಜವಾಗಿ ತನ್ನ ಬೆಳವಣಿಗೆಯನ್ನು ಸ್ವೀಕರಿಸುವುದಿಲ್ಲ. ಗಂಡು ಮಗುವಿನ ಬೆಳವಣಿಗೆಯ ದೈಹಿಕ ಅಂಶಗಳು, ತನ್ನ ಗೆಳೆಯರಲ್ಲಿ, ಸುತ್ತಮುತ್ತಲಿನವರಲ್ಲಿ ಹೆಮ್ಮೆಗೆ ಕಾರಣವಾಗುವಷ್ಟು ಹೆಂಗಸಿನ ದೈಹಿಕ ಅಂಶಗಳು ಕಾರಣ ವಾಗುವುದಿಲ್ಲ. ಈ ದೆಸೆಯಲ್ಲಿ ಗಂಡಿಗೆ ದೊರೆಯುವ ಆತ್ಮೀಯ ಸ್ವಾಗತ ಹೆಣ್ಣಿಗೆ ದೊರೆಯುವುದಿಲ್ಲ. ಪ್ರತಿಯೊಬ್ಬ ಹೆಣ್ಣಿಗೂ ತನ್ನಲ್ಲಿ ಉಂಟಾಗುವ ದೈಹಿಕ ಬದಲಾವಣೆಯ ಬಗ್ಗೆ ಒಂದು ರೀತಿಯ ನಾಚಿಕೆ ಹಾಗೂ ಸಂಕೋಚಗಳಿರುತ್ತವೆ. ಪ್ರತಿಯೊಂದು ಹೆಣ್ಣು ಮಗುವೂ ಪ್ರಾರಂಭದಲ್ಲಿ ತನ್ನ ಎದೆಯ ಭಾಗದ ಬೆಳವಣಿಗೆಯ ಬಗ್ಗೆ ಸಂಕೋಚಯುತ ನಾಚಿಕೆಯ ಭಾವನೆಯನ್ನು ಹೊಂದಿರುತ್ತದೆ. ಹೀಗೆ ಬೆಳವಣಿಗೆಯನ್ನು ಸ್ವೀಕರಿಸುವಲ್ಲಿ ಸಹಜತೆಯ ಮನೋಭಾವ ಹೊಂದಿರದ ಹೆಣ್ಣಿನಲ್ಲಿ, ಬೇರೆಡೆ ವರ್ತಿಸುವಾಗಲೆಲ್ಲ ಈ ಸಂಕೋಚ, ನಾಚಿಕೆಗಳು ತಲೆ ಹಾಕಿ, ಆಕೆ ಮುಕ್ತ ವಾತಾವರಣದಲ್ಲೂ ಮುಕ್ತವಾಗಿ ವರ್ತಿಸದೇ ತನ್ನ ಸ್ವ-ಪ್ರತಿಷ್ಠೆಯ ಒಳಗೇ ಮರೆಯುತ್ತಾಳೆ.

ಇವರನ್ನು ಬೆಳೆಯಿಸುವ ರೀತಿಯಲ್ಲಿ ಸ್ಪಷ್ಟವಾದ ವ್ಯತ್ಯಾಸಗಳು ಕಂಡುಬರುತ್ತವೆ. ಪ್ರಪಂಚದಲ್ಲಿ ಆತ ಕ್ರಿಯಾಶೀಲನಾಗಿ ತೊಡಗುವುದರ ಬಗ್ಗೆ, ಸಜನಶೀಲಾತ್ಮಕತೆಯ ಬಗ್ಗೆ ಆತನ ಪ್ರಜ್ಞೆ ಜಾಗೃತವಾಗುವಂತೆ ಮಾಡುತ್ತಾರೆ. ಗಂಡು ಮತ್ತು ಹೆಣ್ಣು ಮಗುವಿನಲ್ಲಿ ಉಂಟಾಗುವ ಮನೋಭಾವವೆಂದರೆ, ಗಂಡು ಮಗುವಿಗೆ 'ತಾನೇನೋ ಸಾಧಿಸಲ್ಪಡುವುದಿದೆ,' ಎಂಬ ಹಿರಿತನದ ಪ್ರಜ್ಞೆ ಮುಖ್ಯವಾಗಿ ಹೆಣ್ಣಿಗೆ 'ತಾನು ಇತರರಿಗಾಗಿ' 'ಇತರರನ್ನು ಸಂತೋಷ ಪಡಿಸುವುದೇ ಕರ್ತವ್ಯ' ಗುಲಾಮೀತನದ ಪ್ರಜ್ಞೆ.

ಸಿಮೋನ್ ದಿ ಬುವಾ ಗುರುತಿಸುವ ಗುರುತರವಾದ ಅಂಶವೆಂದರೆ ಗುಪ್ತಾಂಗ. ಈ ಬಗ್ಗೆ ಹೆಣ್ಣು ಹಾಗೂ ಗಂಡಿನಲ್ಲಿ ನಿರ್ದಿಷ್ಟಭಾವನೆಯನ್ನು ಹಿರಿಯರು ತುಂಬುತ್ತಾರೆ. ಮಕ್ಕಳಿಗೆ ಸಹಜವಾಗಿ ತೀರಾ ಕುತೂಹಲಕರ ಅಂಗಾಂಗಳೆಂದರೆ ಗುಪ್ತಾಂಗಗಳು. ಮೂತ್ರವಿಸರ್ಜನೆಯ ಕ್ರಿಯೆಯು ವಯಸ್ಸಿನಲ್ಲಿ ಅತ್ಯಂತ ಕುತೂಹಲಕಾರಿಯಾದ ಪಾತ್ರವನ್ನು ವಹಿಸುತ್ತದೆ. ಗಂಡು

ಮಗುವಿನ ಗುಪ್ತಾಂಗದ ಬಗ್ಗೆ ಅರಿವು ಮೂಡಿದಾಗ, ಹಾಗೂ ಆತನ ಮೂತ್ರ ವಿಸರ್ಜನೆಯ ರೀತಿಯ ಬಗ್ಗೆ ತಿಳುವಳಿಕೆ ಉಂಟಾದಾಗ, ಹೆಣ್ಣು ಮಗುವಿನಲ್ಲಿ ಅಗಾಧವಾದ ಕೀಳರಿಮೆಯ ಭಾವನೆ ಉಂಟಾಗುವ ಸಾಧ್ಯತೆ ಇದೆಯೆಂದು ಕರೆನ್ ಹಾರ್ನಿಯು ಗುರುತಿಸುತ್ತಾಳೆ. ಈ ಕ್ರಿಯೆಯಲ್ಲಿ ಗಂಡು ಮಗುವಿನಲ್ಲಿರ ಬಹುದಾದ ಸೌಲಭ್ಯಯುತ ಮನೋಭಾವವಾಗಲೀ ಅಥವಾ ಸುಲಲಿತ ಮನೋಭಾವವಾಗಲೀ ಈಕೆಯಲ್ಲಿ ಇಲ್ಲ. ಮೂತ್ರ ವಿಸರ್ಜನೆಯ ಕಾಲದಲ್ಲಿ ಕುಳಿತುಕೊಳ್ಳುವುದರ ಜೊತೆಗೆ ತನ್ನನ್ನು ಬೆತ್ತಲೆ ಮಾಡಿಕೊಳ್ಳುವ ಸಂದರ್ಭ ಉಂಟಾಗುವುದರಿಂದ, ಈ ಕ್ರಿಯೆಯಲ್ಲಿ ಒಂದು ರೀತಿಯ ನಾಚಿಕೆಯಿಂದ ಒಡಗೂಡಿದ ಸಂಕೋಚ ಭಾವ ಉಂಟಾಗುತ್ತದೆ. ಮಕ್ಕಳಲ್ಲಿ ಸರ್ವೇಸಾಮಾನ್ಯವಾದ ಲೈಂಗಿಕ ಕ್ರಿಯೆಗಳಲ್ಲಿ ಗಂಡು ಮಗು ನಿರರ್ಗಳವಾಗಿ ಆನಂದಿಸಬಹುದಾದ ಸಂತೋಷ, ಆನಂದವನ್ನು ಹೆಣ್ಣು ಮಗು ಆನಂದಿಸುವುದಿಲ್ಲ. ಆಟವೆಂದು ಗಂಡಿಗೆ ತೋರಬಹುದಾದ ಮೂತ್ರ ವಿಸರ್ಜನೆಯ ಕ್ರಿಯೆ ಸಹಜವೆಂಬ ಭಾವನೆಯನ್ನು ಹೆಣ್ಣು ಮಗುವಿನಲ್ಲಿ ಮೂಡಿಸಿದಾಗ ಈ ಬಗ್ಗೆಗಿನ ಕೀಳರಿಮೆಯ ಭಾವನೆ ತೊಲಗಿಸಲು ಸಹಜವಾಗಬಹುದೇನೋ? ಆದರೆ ಪ್ರಕೃತಿ ಧರ್ಮದ ಸಹಜತೆಯ ಅರಿವಿಗೆ ಸಾಮಾಜಿಕ ಒಪ್ಪಂದಗಳು, ರೂಢಿಗತ ಮೌಲ್ಯಗಳು ಸುಲಭವಾಗಿ ಬಿಡುವುದಿಲ್ಲ. ತನ್ನಲ್ಲಿರದ ಒಂದು ಅಂಗ ಆತನಲ್ಲಿದೆ ಎಂಬ ಪರಿವೆ ಉಂಟಾದಾಗ ಹೆಣ್ಣು ಮಗುವಿಗೆ, ಸೌಲಭ್ಯಯುತ ಅಂಗವೊಂದರ ಕೊರತೆ ತನ್ನಲ್ಲಿದೆ ಎಂಬ ಅಗಾಧ ಪ್ರಜ್ಞೆ ಉಂಟಾಗುತ್ತದೆ. ಹೀಗೆ ಕೊರತೆಯ ಪ್ರಜ್ಞೆಯಿಂದಾಗಿ ಸಂಕೋಚ, ನಾಚಿಕೆ, ಮುಂತಾದ ಹೆಣ್ಣಿನ ಗುಣಗಳೆಂದು ಹೇಳಲ್ಪಡುವ ನಡತೆಗಳು ರೂಪಿತವಾಗುತ್ತಾ ಬರುತ್ತವೆ. ಹನ್ನೆರಡು ವರ್ಷದ ನಂತರ ಈಕೆ 'ತಟಸ್ಥ' ಅಥವಾ ನಿರ್ಜೀವ ವಸ್ತುವಾಗಿಬಿಡುವುದು. ಆದರೆ ಬದಲಾದ ಪ್ರಜ್ಞೆಯ ಅವಶ್ಯಕತೆ ಈಕೆಯಲ್ಲಿಯೂ ಇರುವುದರಿಂದ, ಇದು ಯಾವ ರೀತಿ ಈಕೆಯಲ್ಲಿ ರೂಪುಗೊಳ್ಳುತ್ತದೆ ಎಂಬುದನ್ನು ಗೊಂಬೆಯ ಆಟಿಕೆಯ ಉದಾಹರಣೆಯಿಂದ ಸ್ಪಷ್ಟಪಡಿಸಬಹುದಾಗಿದೆ. ಹೆಣ್ಣು ಗೊಂಬೆಯೊಡನೆ ಸಹಜವಾಗಿ ಆಡುವ ಹೆಣ್ಣು ಮಗು ಅದನ್ನು ಶೃಂಗರಿಸುವುದರ ಮೂಲಕ, ಮೊಲೆಯೂಡಿಸುವ ಆಟವಾಡಿಸುವುದರ ಮೂಲಕ, ಅಡಿಗೆ ಆಟವಾಡುವುದರ ಮೂಲಕ ತನ್ನ ಅಸ್ತಿತ್ವ ಗುರುತಿಸಿಕೊಳ್ಳಲು ಪ್ರಯತ್ನಿಸುತ್ತದೆ. ಮಗು ಹಾಗೂ ಗೊಂಬೆಯ ಸಂಬಂಧ ಮಗುವಿನ ಮನಸ್ಸಿನಲ್ಲಿ ಅಗಾಧವಾದ ಪ್ರಭಾವವನ್ನು ಬೀರುತ್ತದೆ. 'ಗೊಂಬೆಯ ಹಾಗೆ ಸುಂದರ' 'ಸುಂದರ ಗೊಂಬೆ' ಈ ರೀತಿಯ ಹೇಳಿಕೆಗಳು ಆಕೆಯ ಮನಸ್ಸಿನಲ್ಲಿ ಉಳಿದು ತಾನು ಗೊಂಬೆಯ ಹಾಗೆ ಸುಂದರವಾಗಿರಬೇಕೆಂಬ ಪ್ರಜ್ಞೆ ಆಕೆಯಲ್ಲಿ ಬೆಳೆಯುತ್ತದೆ.

ತಟಸ್ಥತೆ ಹೆಣ್ಣಿನ ಸಾರ್ವತ್ರಿಕ ಗುಣವಾಗಿ ಕಂಡುಬರುತ್ತದೆ. ಇದರಲ್ಲಿ ದೈಹಿಕ ರೂಪರೇಷೆಗಳಿಗಿಂತ ಪರಿಸರ ಪ್ರಮುಖ ಪಾತ್ರ ವಹಿಸುತ್ತದೆ. ಸ್ವತಂತ್ರವಾಗಿ ಮರ ಏರುವ, ಹೊಡೆದಾಡುವ, ತುಂಬಾ ಒರಟಾದ ಆಟಗಳಲ್ಲಿ ಭಾಗವಹಿಸುವುದರ ಮೂಲಕ ತನ್ನ ಪಾತ್ರ ಸ್ಪಷ್ಟ ಚಿತ್ರವನ್ನು ಕಂಡುಕೊಳ್ಳುತ್ತಾನೆ ಗಂಡು. ಹೆಣ್ಣಿನಲ್ಲಿರುವ ಮೂಲಭೂತ ವಿರುದ್ಧ ಅಭಿಪ್ರಾಯವಾಗಲೀ, 'ಇನ್ನೊಬ್ಬರಿಗೆ ವಸ್ತುವಾಗುವ ಹಾಗೂ ಸ್ವ-ಪ್ರತಿಷ್ಠೆಯ ದ್ವಂದ್ವವಾಗಲೀ ಈತನಲ್ಲಿ ಇರುವುದಿಲ್ಲ. ಹಾಗ್ಗಾಗಿಯೇ ದ್ವಂದ್ವವಿಲ್ಲದೇ ತನ್ನ ಪಾತ್ರದಲ್ಲಿ ಸೃಷ್ಟಿಶೀಲನಾಗುತ್ತಾನೆ. ತನ್ನ ಸೃಜನಶೀಲತೆಯ ಪ್ರಜ್ಞೆ ಹಾಗೂ 'ಬೇರೆಯವರಿಗೆ ವಸ್ತುವಾಗುವ' ಬಾಲ್ಯದ ಪ್ರಜ್ಞೆಯ ದ್ವಂದ್ವದೊಡನೆ ಜೀವನಕ್ಕೆ ಕಾಲಿರಿಸುವ ಹೆಣ್ಣು, ತನ್ನ ಸುತ್ತಮುತ್ತಲಿನ ಪರಿಸರದಲ್ಲಿ, ಹಾಗೂ ತನ್ನ ಬಾಲ್ಯದ ಪ್ರಜ್ಞೆಯ ಒತ್ತಡದಲ್ಲಿ ತನ್ನ ಸೃಜನಶೀಲಾತ್ಮಕತೆಯನ್ನು ದೂರ ತಳ್ಳಬೇಕಾಗುವುದಲ್ಲದೇ, ತನ್ನ ಅಸ್ವತಂತ್ರತೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಗೊಂಬೆಯ ಹಾಗೆ ನೋಡಲ್ಪಡು ವುದರಿಂದ ಆಕೆ ತನ್ನದೇ ಆದ ವಿಷವೃತ್ತವೊಂದನ್ನು ಸೃಷ್ಟಿಸಿ ಕೊಳ್ಳುತ್ತಾಳೆ. ಪ್ರಪಂಚವನ್ನು ಅರಿಯುವಲ್ಲಿ ಸ್ವತಂತ್ರವಾದ ಚಟುವಟಿಕೆಗಳು ಆಕೆಯಲ್ಲಿ ಕಂಡುಬರುವುದಿಲ್ಲ ಆದರೆ ಗಂಡು ಮಗು ಬಾಲ್ಯದಿಂದ ಪ್ರೋತ್ಸಾಹಿಸಲ್ಪಡುವ ರೀತಿಯಲ್ಲಿ ಈಕೆಯೂ ಸಹ ಪ್ರೋತ್ಸಾಹಿಸಲ್ಪಟ್ಟರೆ, ಸಮಾನ ತರಹೆಯ ಸೃಜನಶೀಲಾತ್ಮಕತೆಯನ್ನು ಈಕೆಯಲ್ಲಿಯೂ ಕಾಣಬಹುದಾಗಿದೆ. ಗಂಡಸಿನ ಆಶ್ರಯದಲ್ಲಿ ಬೆಳೆಯುವ ಹೆಣ್ಣು, ಆರೋಪವಾಗಿ, ಈ ರೀತಿಯ ಹೆಣ್ತನದ ಭಾವನೆಯಿಂದ ತಪ್ಪಿಸಿಕೊಳ್ಳುತ್ತಾಳೆ. ತಾಯಿ ತನ್ನ ಗಂಡು ಮಗುವನ್ನು ಗೌರವಿಸುವುದರಿಂದ 'ಹೆಣ್ತನದ ಭಾವನೆಗಳು ಅವನಲ್ಲಿ ಕಾಣಬರುವುದಿಲ್ಲ. ಆದರೆ ತನ್ನ ಹೆಣ್ಣುಮಗುವನ್ನು 'ಹೆಂಗಸು ಪ್ರಪಂಚಕ್ಕೆ ದೂಡಲು, ತಾಯಿ ಸಿದ್ಧತೆ ನಡೆಸುವುದರಿಂದಲೇ, ಎಲ್ಲಾ ರೀತಿಯ 'ಹೆಣ್ತನದ' ನಡತೆಗಳೂ ಆಕೆಯಲ್ಲಿ ಒಡಮೂಡಿ ಬರುತ್ತದೆ.

ತಾಯಿ ತನ್ನ ಹೆಣ್ಣು ಮಗುವಿನ ವಿಚಾರದಲ್ಲಿ ತೀರಾ ವಿರುದ್ಧವಾದ ನಡತೆಗಳನ್ನು ತೋರಿಸುತ್ತಾಳೆ. ತನ್ನ ಮಗುವನ್ನು ಒಳ್ಳೆಯ 'ಹೆಂಗಸಾಗಿ' ಮಾಡಿದಲ್ಲಿ, ಆಕೆಗೆ ಸಮಾಜದಲ್ಲಿ ಸ್ಥಾನ ಸುಲಭವಾಗಿ ಸಿಗುವುದರಿಂದ ಈ ಬಗ್ಗೆ ತೀವ್ರವಾಗಿ ಕಾಳಜಿ ವಹಿಸುತ್ತಾಳೆ. ಅಡಿಗೆ ಮಾಡುವುದು, ಮನೆಯ ಒಳ ವ್ಯವಹಾರ ಗಳು, ಹೊಲಿಯುವುದು, ಈ ರೀತಿಯ ಚಟುವಟಿಕೆಗಳನ್ನು ಹೆಣ್ಣು

ಮಗುವಿನ ಮನದಲ್ಲಿ ಒತ್ತಿಒತ್ತಿ ತುಂಬುತ್ತಾಳೆ. ಬಟ್ಟೆಯ ಬಗ್ಗೆ ಜಾಗ್ರತೆ ವಹಿಸುವುದು, ಕೂದಲಿನ ಸೌಂದರ್ಯದ ಬಗ್ಗೆ ಕಾಳಜಿ ಮೂಡಿಸುವುದು, - ಈ ರೀತಿಯ ಪ್ರಜ್ಞೆ ರೂಪಿಸುವುದರ ಮೂಲಕ ಆಕೆ ವಹಿಸಬೇಕಾದ ಪಾತ್ರದ ಸ್ಪಷ್ಟ ಅರಿವು ಮೂಡಿಸುತ್ತಾಳೆ.

ತಾಯಿಯೊಂದಿಗೆ ಬೆಳೆಯಲ್ಪಡುವ ಹೆಣ್ಣು ಮಗು, ತಾಯಿಯ ಚಿತ್ರವನ್ನು ಅನುಕರಿಸಲು ಯತ್ನಿಸುತ್ತದೆ. ಹೀಗೆ ಅನುಕರಿಸುವಾಗ ಕೆಲವು ನಿರ್ದಿಷ್ಟ ಸ್ಥಾನಮಾನಗಳು ಸಿಗುವುದರಿಂದ ಮತ್ತೆ ಅಸ್ತಿತ್ವಕ್ಕೆ ಹೋರಾಡುವ ಪ್ರಶ್ನೆಯೇ ಇಲ್ಲ. ಗೊಂಬೆಯನ್ನು ಸಮಾಧಾನ ಮಾಡುವ, ತನ್ನ ಚಿಕ್ಕ ಸಹೋದರಿ ಅಥವಾ ಸಹೋದರರ ಮೇಲೆ ಅಧಿಕಾರ ಚಲಾಯಿಸುವ ಕ್ರಿಯೆಗಳ ಮೂಲಕ ತನ್ನ ಪಾತ್ರವನ್ನು ನಿರ್ವಹಿಸಿಕೊಂಡು ಬರುತ್ತಾಳೆ. ಮನೆಯ ಒಳ ವ್ಯವಹಾರವನ್ನು ಚೆನ್ನಾಗಿ ನಡೆಸುವ, ಮನೆಯ ಚೊಕ್ಕಟತನ, ಕಸ ಗುಡಿಸುವುದು, ತರಕಾರಿ ಹೆಚ್ಚುವುದು, ಸಣ್ಣ ಮಕ್ಕಳಿಗೆ ಉಪಚರಿಸುವುದು, ಅಡಿಗೆ ಮಾಡುವುದು. - ಈ ರೀತಿಯ ಆನಂದವಿರದ ಯಾಂತ್ರಿಕ ಹೋರಾಟದ ಅಸ್ತಿತ್ವವನ್ನು ಯಾವ ದ್ವಂದ್ವವೂ ಇಲ್ಲದೇ ಒಪ್ಪಿಕೊಳ್ಳುತ್ತಾಳೆ. ತಾಯಿಯ ಚಿತ್ರಣದಲ್ಲಿ ತನ್ನನ್ನು ಕಂಡುಕೊಳ್ಳುವ ಬಗ್ಗೆ ಒಂದು ರೀತಿಯ ಪ್ರೌಢ ಮನೋಭಾವ ಆಕೆಯಲ್ಲಿ ಕಂಡುಬರುತ್ತದೆ.

●

## ಓದುಗರ ವಿಭಾಗ

ಮಾನಸ ಪತ್ರಿಕೆ ಬಂದು ತಲುಪಿದವು. ನನಗೆ ಓದಿ ಬಹಳ ಸಂತೋಷ, ದುಃಖ ಒಟ್ಟಿಗೆ ಆಯಿತು. ನೀವು ಮಹಿಳೆಯರೇ ನಡೆಸುತ್ತಿರುವ ಈ ಮಾನಸ ಪತ್ರಿಕೆಯನ್ನು ನೋಡಿ ಬಹಳ ಸಂತೋಷವಾಯಿತು. ನೊಂದವಳ ಕಥೆ ಓದಿ ಬಹಳ ಸಂಕಟವಾಯಿತು. ರಾತ್ರಿಯೆಲ್ಲಾ ನಿದ್ದೆ ಮಾಡಿಲ್ಲ, ಅಕ್ಕ ಕಥೆ ಬಹಳ ಚೆನ್ನಾಗಿತ್ತು. ನಾನು ಹೆಚ್ಚು ಓದಿದವಳಲ್ಲ, ಇರಲಿ, ಈಗ ನಾನು ಚಂದಾದಾರಳಾಗುತ್ತೇನೆ. ಈಗ ನೀವು ನಡೆಸುತ್ತಿರುವ ಪತ್ರಿಕೆ ಇನ್ನು ಎತ್ತರ, ಎತ್ತರ ಬೆಳೆಯಲಿ.

*- ಕೆ. ಹೇಮಲತಾ ಗೋಪಾಲ್‌ರಾವ್*

◆ ◆ ◆

ಪತ್ರಿಕೆ ಎಂದ ಮೇಲೆ ಕೆಲವು ಲೇಖನಗಳು ಹಿಡಿಸುತ್ತದೆ, ಕೆಲವು ಹಿಡಿಸುವುದಿಲ್ಲ, ಹಾಗೆಂದು ನೀವುಗಳು ಮಾಡುತ್ತಿರುವ ಸಾಹಸಕ್ಕೆ ಒಂದು ಬೆಲೆ ಇಲ್ಲವೇ!

*- ಎಸ್. ಪಿ. ಶಂಕರನಾರಾಯಣರಾವ್*

◆ ◆ ◆

ಮಾನಸ ಪತ್ರಿಕೆ ನನ್ನ ಕೈಗೆ ಕೆಲವು ತಿಂಗಳಿಂದ ಬರುತ್ತಿದೆ. ಈ ಬಗ್ಗೆ ಕೃತಜ್ಞತೆಗಳು. ಪತ್ರಿಕೆಯನ್ನು ಗಮನಿಸಿದ್ದೇನೆ, ನಿಮ್ಮ ಪತ್ರಿಕೆ ಸಮತಾವಾದದ ಬಗ್ಗೆ ಹೆಚ್ಚು ಒತ್ತು ನೀಡುತ್ತಿದೆ ಎಂದು ನನಗೆ ಅನಿಸುತ್ತದೆ. ನನ್ನ ದೃಷ್ಟಿಕೋನದ ಚಿಂತನೆಗೆ, ಒಲುವಿನ ಗ್ರಾಸವಾಗಿದೆ ಎಂದು ಹೇಳಲು ಸಂತೋಷಪಡುತ್ತೇನೆ. ಸಮಾಜದ ಅತಿ ದೀನರ, ದಲಿತರ ಸಾಮಾಜಿಕ ಬಾಳ್ವೆಯನ್ನು ಉತ್ತುಂಗಕ್ಕೇರಿಸಲೂ ಹಾಗೂ ಸಾಮಾಜಿಕ ಅನಿಷ್ಟಗಳಾದ ವರದಕ್ಷಿಣೆಯನ್ನು ನಿರ್ಮೂಲನ ಮಾಡಲು ಪತ್ರಿಕೆ ಪ್ರಯತ್ನಿಸಲಿ.

*- ಎ. ಗೋಪಾಲಗಾರ್ಗ*

◆ ◆ ◆

ಪತ್ರಿಕೆ ಮೆಚ್ಚುಗೆಯಾಗಿದೆ, ಇಲ್ಲಿನ ವೈಚಾರಿಕ ಲೇಖನಗಳು, ಸ್ತ್ರೀವಾದಿ ಚಳುವಳಿಯ ಈ ಸಂದರ್ಭದಲ್ಲಿ ಮಹಿಳೆಯರಿಗೆ ಪತ್ರಿಕೆ ಮಾರ್ಗದರ್ಶಿಯಾಗಬಲ್ಲದು. ನಿಮ್ಮ ಸಾಹಸ ಖಂಡಿತವಾಗಿಯೂ ಅಭಿನಂದನೀಯ!

ನೀವು ಕಳಿಸಿದ ಎಲ್ಲ ಸಂಚಿಕೆಗಳ ಲೇಖನಗಳನ್ನು ಆಸಕ್ತಿಯಿಂದ ಓದಿದ್ದೇನೆ. ನಿಮ್ಮ ಪತ್ರಿಕೆಯ ಕುರಿತು ನಿನ್ನೆ ಇಲ್ಲಿ ನಡೆದ ಉತ್ತರ ಕರ್ನಾಟಕ ಲೇಖಕಿಯರ ಸಂಘದ ಸಭೆಯಲ್ಲಿ ಅಭಿನಂದಿಸಿದ್ದೇನೆ.

*- ಸಿದ್ದು ಬಿ. ಯಾಪಲಪರವಿ, ಗದಗ*



ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 100 ರೂ**

*ಸಂ. ಮಂಡಳಿ*

BOOK-POST
PRINTED MATTER



REGD No. KRNA 324

Nayana
c/o H.S. push
No. 95. g.v.
Rd, Yelachan
J.P. Nagar
Bangalore –

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067